# "ಜೋಳದರಾಶಿ ದೊಡ್ಡನಗೌಡರ 'ನಂದೇ ನಾನೋದಿದೆ"

ಒಂದು ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು
ಶ್ರೀಮತಿ. ಹೇಮಾ. ಬಿ.
ನೊಂದಣಿ ಸಂಖ್ಯೆ : 150101030012

ಮಾರ್ಗದರ್ಶಕರು
ಶ್ರೀ. ಎಂ. ಮಲ್ಲಿಕಾರ್ಜುನಗೌಡ
ಸಹಾಯಕಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ,
ಜುಲೈ 2016






ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276

# "ಜೋಳದರಾಶಿ ದೊಡ್ಡನಗೌಡರ 'ನಂದೇ ನಾನೋದಿದೆ"

ಒಂದು. ಅಧ್ಯಯನ

ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ಸಂಪ್ರಬಂಧ



ಸಂಶೋಧಕರು

ಶ್ರೀಮತಿ. ಹೇಮಾ. ಬಿ.

ನೊಂದಣಿ ಸಂಖ್ಯೆ : 150101030012

ಮಾರ್ಗದರ್ಶಕರು

ಶ್ರೀ. ಎಂ. ಮಲ್ಲಿಕಾರ್ಜುನಗೌಡ

ಸಹಾಯಕಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ,

ಜುಲೈ 2016



ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – 583 276

## ಸಂಶೋಧನಾ ವಿದ್ಯಾರ್ಥಿನಿಯ ಪ್ರಮಾಣ ಪತ್ರ

**"ಜೋಳದರಾಶಿ ದೊಡ್ಡನಗೌಡರ 'ನಂದೇ ನಾನೋದಿದೆ"** ಒಂದು ಅಧ್ಯಯನ ಎಂಬ ಸಂಪ್ರಬಂಧವನ್ನು ಶ್ರೀ ಎಂ. **ಮಲ್ಲಿಕಾರ್ಜುನಗೌಡ** ಸಹ ಪ್ರಾಧ್ಯಾಪಕರು ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯ ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Hema

**ಹೇಮಾ .ಬಿ**
**ಸಂಶೋಧನ ವಿದ್ಯಾರ್ಥಿನಿ**
ನೊಂದಣಿ ಸಂಖ್ಯೆ : 150101030012
ಕನ್ನಡ ಸಾಹಿತ್ಯಅಧ್ಯಾಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದಿನಾಂಕ : 30–07–2016
ಸ್ಥಳ : ಬಳ್ಳಾರಿ

## ಮಾರ್ಗದರ್ಶಕರ ಪ್ರಮಾಣ ಪತ್ರ

**"ಜೋಳದರಾಶಿ ದೊಡ್ಡನಗೌಡರ 'ಸಂದೇ ನಾನೋದಿದೆ" ಒಂದು ಅಧ್ಯಯನ** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಬಿ.ಹೇಮಾ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ, ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**
ಶ್ರೀ. ಎಂ. ಮಲ್ಲಿಕಾರ್ಜುನಗೌಡ
ಸಹಾಯಕ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಕನ್ನಡ ಸಾಹಿತ್ಯ ಅಧ್ಯಾಯನ ವಿಭಾಗ,

ದಿನಾಂಕ : 30-07-2016

ಸ್ಥಳ : ಬಳ್ಳಾರಿ

## ಅಧ್ಯಾಯಗಳ ವರ್ಗೀಕರಣ

# ಅಧ್ಯಾಯ – 1

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ.

### 1.1 ಪ್ರಸ್ತಾವನೆ.

ಸಾಹಿತ್ಯದ ಅನೇಕ ಪ್ರಕಾರಣಲ್ಲಿ ಆತ್ಮಕಥನವೂ ಒಂದು. ಸಾಂಸ್ಕೃತಿಕ ಒತ್ತಡದ ಭಾಗವಾಗಿ ಆತ್ಮಕಥೆಗಳನ್ನು ಅಧ್ಯಯನ ಮಾಡಬೇಕಾಗಿದೆ. ಆತ್ಮಕಥೆಗಳನ್ನು ಪ್ರಧಾನವಾಗಿ ಸಾಹಿತಿಗಳು ಬರೆದಿದ್ದಾರೆ. ಉಳಿದಂತೆ ಹೋರಾಟಗಾರರು, ರಾಜಕಾರಿಣಿಗಳು, ಮಠಾಧೀಶರು, ಸಾಮಾನ್ಯ ಶಿಕ್ಷಣ, ಹತ್ತು ವರ್ಷ ಆಸ್ಪತ್ರೆಯಲ್ಲೇ ಕಳೆದ ಅಂಗವಿಕರಲು, ಪೋಲೀಸ್ ಅಧಿಕಾರಿ, ವಿಜ್ಞಾನಿಗಳು, ಸಿನಿಮಾ ನಟರು, ಕಲಾವಿದರು, ನಾಟಕರಾರರು, ಸಂಗೀತಗಾರರು, ವೈದ್ಯರು, ಪತ್ರಕರ್ತರು, ಗೃಹಿಣಿಯರು, ಮಂಗಳಮುಖಿಯರು, ಒಬ್ಬ ನಿವೃತ್ತ ಅಂಚೆ ಪೇದೆಯವರೆಗೂ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಹಲವಾರು ಜನರು ತಮ್ಮ ಆತ್ಮಕತೆಗಳನ್ನು ಬರೆದುಕೊಂಡಿದ್ದಾರೆ.

ಇವರೆಲ್ಲರೂ ಸಮಾಜದ ವಿಭಿನ್ನ ವರ್ಗದವರು ಮತು ವಿಭನ್ನ ಮನೋಧರ್ಮದವರು. ಈ ಹಿಂದಿನ ದಶಕಗಳಿಗೆ ಹೋಲಿಸಿದರೆ ನಿರ್ಧಿಷ್ಟವಾಗಿ ಈ 90 ರ ದಶಕದಲ್ಲಿ ಆತ್ಮ ಕಥೆಗಳು ಹೆಚ್ಚು ಬಂದಿವೆ, ಈ ಅಂಶವೂ ಆತ್ಮಕಥೆಗಳ ಬಗ್ಗೆ ಕುತೂಹಲ ಮತ್ತು ಆಸಕ್ತಿಯನ್ನು ಹುಟ್ಟಿಸುತ್ತದೆ. ಸಾಮಾಜಿಕವಾಗಿ ಗುರುತಿಸಿಕೊಳ್ಳಲು ಮತ್ತು ದಾಖಲಾಗಲು ಬರವಣಿಗೆ ಮತ್ತು ದೃಶ್ಯ ಮಾಧ್ಯಮಗಳಲ್ಲಿ ದಾಖಲಾಗುವ ತೀವ್ರತೆ ಇಂದು ಕಾಣುತ್ತಿದೆ. ಈ ಬಗೆಯ ದಾಖಲೀಕರಣ ಮಾತ್ರವೇ ಚರಿತ್ರೆಯಾಗಬಲ್ಲದು ಎಂಬ ನಂಬಿಕೆಯೂ ಇದರಲ್ಲಿದೆ. ಅಂದರೆ ವರ್ತಮಾನದಲ್ಲಿ ದಾಖಲೀಕರಣಗೊಳ್ಳುವುದೆಂದರೆ ಭವಿಷ್ಯದಲ್ಲಿ 'ಚರಿತ್ರೆ'ಯಾಗುವ ಅಪೇಕ್ಷೆಯು ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ಕೆಲಸ ಮಾಡುತ್ತಿದೆ.

ಒಬ್ಬ ವ್ಯಕ್ತಿಯು ಜೀವನ ವಿವರಗಳನ್ನು ಮತ್ತೊಬ್ಬ ವ್ಯಕ್ತಿ ಬರೆದಾಗ ಜೀವನಚರಿತ್ರೆ ಎನಿಸಿಕೊಳ್ಳುತ್ತದೆ. ಒಬ್ಬ ವ್ಯಕ್ತಿಯು ತನ್ನ ಜೀವನ ವಿವರಗಳನ್ನು ತಾನೇ ಬರೆದಿಕೊಂಡಾಗ ಆತ್ಮ ಚರಿತ್ರೆ ಎನಿಸಿಕೊಳ್ಳುತ್ತವೆ.

ಆತ್ಮ ಕತೆ ಬರೆಯುವುದು ಯಾಕೆ? ಎಂಬ ಪ್ರಶ್ನೆಗಳು ಏಳುವುದು ಸಹಜ. ಹಾಗಾಯೇ ಆತ್ಮ ಕತೆಯಲ್ಲಿ ಏನನ್ನು ಬರೆಯಬೇಕು, ಎಷ್ಟನ್ನು ಬರೆಯಬೇಕು? ಎಲ್ಲಿಂದ ಆರಂಭ? ಎಲ್ಲಿಗೆ ಮುಕ್ತಾಯ? ಮೊದಲಾದವುಗಳು ಗಮನಕ್ಕೆ ಬರುತ್ತವೆ. ಆತ್ಮ ಪ್ರಶಂಸೆಯೂ ಆಗದೇ, ಅನ್ಯರ ಆತ್ಮ ನಿಂದನೆಗೂ ಆಗದೆ. ಸಹಜ ಜೀವಿಗಳ ತೇಜೋವಧೆಗೂ ಎಳಸದೆ ತಮ್ಮ ಬದುಕನ್ನು ನಿರೂಪಿಸುವುದು ಹೇಗೆ ಇದು ಒಂದು ಬಗೆಯ ಸವಾಲು ಇದಕ್ಕಾಗಿ ನೆನಪುಗಳ ಆಯ್ಕೆಯ ಮತ್ತು ನಿರಾಕರಣೆಗಳ ಕುರಿತು ಪ್ರತಿಯೊಬ್ಬರದೂ ಒಂದೊಂದು ನಿಲುವು ಇರುವುದನ್ನು ಕಾಣಬಹುದು.

ಆತ್ಮ ಕತೆಯನ್ನು ಯಾವಾಗ ಬರೆಯಬೇಕು? ಎಂಬ ಪ್ರಶ್ನೆಯು ಕಾಡುವುದು ಸಹಜ. ಸಾಮಾನ್ಯವಾಗಿ ಬದುಕಿನ ಉತ್ತರಾರ್ಧದಲ್ಲಿ ಆತ್ಮ ಕತೆ ಬರೆದವರೇ ಹೆಚ್ಚು, ಯಾವುದಕ್ಕೂ ಬದುಕು ಮತ್ತು ಮನಸು ಪಕ್ವವಾದಗಲೇ ಆತ್ಮಕತೆ ಹೆಚ್ಚು ಗಟ್ಟಿಯಾಗುತ್ತದೆ ಎಂಬುದು ಸಾಮಾನ್ಯ ತಿಳುವಳಿಕೆ, ಕೆಲವರು ತಮ್ಮ ಇಳಿಗಾಲದಲ್ಲಿ ಆತ್ಮಕತೆ ಬರೆದರೆ, ಕೆಲವರು ಸ್ನೇಹಿತರ ಒತ್ತಾಸೆಯ ಮೇರೆಗೆ ಬರೆದಿದ್ದಾರೆ. ಇನ್ನೂ ಕೆಲವರು ತಮ್ಮ ನಡುವಯಸ್ಸಿನಲ್ಲೇ ಆತ್ಮಕತೆ ಬರೆದಿರುವುದನ್ನು ಕಾಣಬಹುದು. ಯಾರು ಎಲ್ಲವನ್ನು ಹೇಳಿಕೊಳ್ಳುವುದಿಲ್ಲ. ಹೇಳಿಕೊಳ್ಳಬೇಕೆಂದು ನಿರೀಕ್ಷಿಸುವುದು, ಆದೇಶಿಸುವುದು ಸಾಧ್ಯವೂ ಇಲ್ಲ. ಬರೆಯುವ ಮತ್ತು ಓದುವ ಇಬ್ಬರಿಗೂ ಇದರಿಂದ ಯಾವ ಉದ್ದೇಶ ಸಾರ್ಥಕ (ಅ) ಸಾಧಿತವಾಗಬೇಕಿದೆ ಎಂಬ ಅಂಶ ಸ್ಪಷ್ಟವಾಗಿದ್ದರೆ ಅಂತಹ ಬರಹ (ಅ) ಓದು ಸಾರ್ಥಕವಾಗುತ್ತದೆ.

ಒಂದು ಆತ್ಮ ಕಥನದ ಓದು ಎಂದರೆ ಅದು ಒರ್ವ ವ್ಯಕ್ತಿ ಮತ್ತು ಅವರ ಬದುಕಿನೊಂದಿಗೆ ನಡೆಸುವ ಅನುಸಂದಾದದ ಇತರರ ಹೋರಾಟದ ಬದುಕನ್ನು, ಕಷ್ಟಗಳು ಹತ್ತಿಯಂತೆ ಹಗರುವಾಗಿ ಕಾಣಬಹುದು. ನಮ್ಮ ಇಕ್ಕಟ್ಟುಗಳಿಂದ ಬಿಡುಗಡೆ ಹೊಂದಲು ಬೆಳಕಿಂಡಿಗಳನ್ನು ತೆರೆಯಬಹುದು. ಸಮಸ್ಯೆಗಳ ಸರ್ವ ಸಾಮಾನ್ಯತೆ ಮತ್ತು ಅಳ ವಿಸ್ತಾರಗಳ ಅರಿವನ್ನು ನೀಡಬಹುದು ಸಂಘಟನೆಯ ಅಗತ್ಯವನ್ನು ಮನವರಿಕೆ ಮಾಡಬಹುದು ಮತ್ತು ಇಂತಹ ಇನ್ನೂ ಅನೇಕ ಸಾಧ್ಯತೆಗಳನ್ನು ಮುಂದಿಡಬಹುದು.

ಆತ್ಮ ಕತೆ ಬರೆಯುವವರು ತಾವು ಹಾದು ಬಂದ ಸುಖಿದ ದಿನಗಳ ಎದುರಾದ ಕಷ್ಟಗಳನ್ನು ನಿರ್ವಹಿಸಿದ ಬಗೆ ಮೀರಿದ ಬಗೆಯನ್ನು ತೆರೆದಿಟ್ಟಲ್ಲಿ ಅಂತಹ ಆತ್ಮ ಕಥೆಗಳ ಓದು ನಮಗೆ ಒಂದು ಬಗೆಯ ಧೈರ್ಯ, ಸಮಸ್ಯೆಯನ್ನು ಎದುರಿಸುವ ಗಟ್ಟಿತನ, ವೈಯಕ್ತಿಕ ಮಿತಿಗಳನ್ನು ಮೀರುವ ಶಕ್ತಿ ಮತ್ತು ಸಾಂಘಿಕ ಬದುಕಿನ ಹರವು ಮತು ಸುಖಗಳನ್ನು ತಿಳಿಸಿಕೊಡುತ್ತವೆ. ಒಬ್ಬರ ಬದುಕು ಇನ್ನೊಬ್ಬರಿಗೆ ಮಾರ್ಗದರ್ಶನವಾಗುವಲ್ಲಿ ಸಫಲವಾಗುತ್ತದೆ.

ಜೀವನ ವಿವರಗಳ ಆಯ್ಕೆಯಲ್ಲಿ, ಜೋಡಿಸುವಿಕೆಯಲ್ಲಿ, ನಿರೂಪಣೆಯಲ್ಲಿ ಹಾಗೂ ಮಂಡನೆಯಲ್ಲಿ ಜೀವನ ಚರಿತ್ರೆಗೂ ಆತ್ಮ ಚರಿತ್ರೆಗೂ ವ್ಯತ್ಯಾಸವಿದೆ. ಆತ್ಮ ಕಥೆಯ ಒತ್ತಾಸೆಯ ಮೂಲ ವ್ಯಕ್ತಿ ನೆಲೆಯದೊ ಅಥವ ಸಮುದಾಯ ನೆಲೆಯದೊ ಎಂಬ ಪ್ರಶ್ನೆಯೂ ಎದುರಾಗುತ್ತದೆ. ಸಮುದಾದಯ ನೆಲೆಯಾಗಿದ್ದರೆ. ಅದು ಸಮುದಾಯದ ಅಪೇಕ್ಷೆಯೇ ಆಗಿರುತ್ತದೆ. ವ್ಯಕ್ತಿ ನೆಲೆಯದಾಗಿದ್ದರೆ ಅದು ವ್ಯಕ್ತಿಯ ಅಪೇಕ್ಷೆಯಾಗಿರುತ್ತದೆ. ಆದರೆ ವ್ಯಕ್ತಿಯ ಅಪೇಕ್ಷೆ ಎಂಬುದನ್ನು ಕೂಡ ಸಮಾಜವೇ ಸೃಷ್ಟಿಸುತ್ತದೆ. ಹಾಗಾಗಿ ತನ್ನ ಬಗ್ಗೆ ತಾವು ಹೇಳಿಕೊಳ್ಳಬೇಕೆಂಬ ಹಂಬಲವು ಒಂದು ಹಂತದಲ್ಲಿ ವ್ಯಕ್ತಿಯ ಮೂಲದ್ದು ಎಂದು ಕಾಣಿಸಿದರೂ ಮತ್ತೊಂದು ದೃಷ್ಟಿಯಲ್ಲಿ ಅದು ಸಮಾಜ ಮೂಲದ್ದು ಆಗಿರುತ್ತದೆ. (ಅ) ಇವೆರಡೂ ಪರಸ್ಪರ ಒಂದನ್ನೊಂದು ಅವಲಂಬಿಸಿರುತ್ತವೆ.

ಆತ್ಮ ಕಥನಕಾರರು ತಮ್ಮ ಬರವಣಿಗೆಯ ಅನುಭವ ಬಗ್ಗೆ ಹೇಳಿರುವ ಮಾತುಗಳನ್ನು ಉಲ್ಲೇಖಿಸುತ್ತಾ ಆ ಬಗ್ಗೆ ಚರ್ಚೆಯನ್ನು ಬೆಳೆಸಬಹುದು. ಶಿವರಾಮ ಕಾರಂತರು ತಮ್ಮ 'ಹುಚ್ಚು ಮನಸಿನ ಹತ್ತು ಮುಖಗಳು' ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. 'ನನ್ನ ಸಾರ್ವಜನಿಕ ಜೀವನದ ಎರಡೂವರೆ ದಶಕಗಳ ಅವಧಿ ಮುಗಿದ ಹೊತ್ತಿಗೆ ಯಾವುದೋ ಒಂದು ಮನೋಲಹರಿಯಿಂದಾಗಿ ನನ ಆತ್ಮ ಕಥೆಯನ್ನು ಬರೆಯುವ ಪ್ರಯತ್ನ ಮಾಡಿದೆ. ನನ್ನ ಜೀವನ ವೃತ್ತಿ ನನ್ನ ಒಬ್ಬಿಬ್ಬರು ಮಿತ್ರರಿಗೆ ಕುತೂಹಲಕಾರಿಯಾಗಿ ಕಂಡುದರಿಂದ, ಅವರು ತಾವು ಅದನ್ನು ಬರೆಯುತ್ತೇವೆಂದು ಉತ್ಸುಕತೆ ತೋರಿಸಿದರು. ನಾನು ಅವರಿಗೆ ಪರಿಹಾಸ ಮಾಡುತ್ತಾ, 'ನೀವು ನನ್ನನ್ನು ಕೊಲ್ಲಬೇಕಿಲ್ಲ. ನನ್ನ ಆತ್ಮಹತ್ಯೆಯನ್ನೆ ನಾನೇ ಮಾಡಿಕೊಳ್ಳುತ್ತೇನೆ' ಎಂದುದುಂಟು. ಅದರಲ್ಲಿ ನನ್ನ ಬಾಲ್ಯದಿಂದ ತೊಡಗಿ ಸುಮಾರು 1950ರ ತನಕ ದೊರೆತ

ನನ್ನ ಅನುಭವಗಳನ್ನು ನನ್ನ ಬದುಕಿಗೆ ಸಂಬಂಧಪಟ್ಟ ವಿದ್ಯಮಾನಗಳನ್ನು ಬರೆದು ಮುಗಿಸಿದೆ. ಈ ಉಲ್ಲೇಖದಲ್ಲಿ ಶಿವರಾಮ ಕಾರಂತರು ತಮ್ಮ ಜೀವನ ವಿವರಗಳನ್ನು ಬೇರೆಯವರು ಬರೆದಾಗ ಬಂದೊದಗುವ ಸಮಸ್ಯೆಗಳ ಬಗ್ಗೆ ಎಚ್ಚರ ವಹಿಸಿದ್ದಾರೆ. ಇದರಿಂದ ತನ್ನ ಬಗ್ಗೆ ತಾವು ಬರೆದುಕೊಳ್ಳುವ ತಿರ್ಮಾನಕ್ಕೆ ಬಂದಿದ್ದಾರೆ.

'ಆತ್ಮಕಥೆ ಎಂದರೆ ಪೂರ್ತಿ ವಾಸ್ತವವಾಗಿ ನಡೆದುದರ ಕಥೆ ಎಂದು ಹೇಳಲಾಗದು' ಎಂಬ ನಿಲುವನ್ನು ಮಂಡಿಸಿರುವ ಶ್ರೀರಂಗರು ತಮ್ಮ ಆತ್ಮ ಕಥೆಯ ಉದ್ದೇಶವನ್ನು ಹೀಗೆ ಹೇಳಿಕೊಂಡಿದ್ದಾರೆ 'ಸಾಹಿತ್ಯ ವಿಮರ್ಶಕರು ಕಥೆಯನ್ನು ಲಿಲಿತ ಸಾಹಿತ್ಯ ಎಂದೆಣಿಸುವರು. ಆತ್ಮ ಕಥೆ ಮಾತ್ರ ಲಲಿತವಲ್ಲದ ಸಾಹಿತ್ಯ ವಿಭಾಗ ಎಂದು ಅವರ ಅಭಿಪ್ರಾಯ. ಕಥೆಯು ಇನ್ನೊಬ್ಬರನ್ನು ಕುರಿತುದು ಆತ್ಮ ಕಥೆ ತನ್ನನ್ನು (ಬರೆದವವನನ್ನು) ಕುರಿತುದು ಎಂಬುದಕ್ಕಾಗಿ ಈ ಭೇದವಿರಬಹುದೇ? ಇನ್ನೊಬ್ಬರ ಬಗ್ಗೆ ಕಲ್ಪನಾಮೂಲ ಜ್ಞಾನ ಹೆಚ್ಚು, ತನ್ನ ಬಗ್ಗೆ ಅನುಭವ ಮೂಲ ಜ್ಞಾನ ಹೆಚ್ಚು ಎಂದು ಹೇಳಬಹುದೇ? ಹಾಗೆ ನೋಡಿದರೆ ಕಥೆಯಲ್ಲಿಯಂತೆ ಪ್ರತ್ಯಕ್ಷ ಅನುಭವಕ್ಕಿಂತ ಅಸ್ಪಷ್ಟ ಸ್ಮರಣೆಗಳ ಆಧಾರವೇ ಹೆಚ್ಚಾಗಬಹುದಾಗಿದೆ ಅದರಂತೆಯೇ ಎರಡರಲ್ಲೂ ಸತ್ಯದ ಇಲ್ಲವೇ ಪ್ರತ್ಯಕ್ಷದ ಅಂಶವೂ ಸಾಕಷ್ಟಿದೆ ಎನ್ನಬಹುದಲ್ಲವೆ.

## 1.2 ಅಧ್ಯಯನದ ಉದ್ದೇಶ.

- ಆತ್ಮ ಕತೆಗಳನ್ನು ಯಾರು ಬರೆಯುತ್ತಾರೆ? ಯಾಕೆ ಬರೆಯುತ್ತಾರೆ ಆತ್ಮ ಕತೆಗಳು ಯಾಕೆ ಬೇಕು? ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ ಎಷ್ಟರ ಮಟ್ಟಿಗೆ ತನ್ನನ್ನು ಪ್ರಾತಿನಿಧಿಕವಾಗಿ ಅಭಿವ್ಯಕ್ತಿಸಿಕೊಳ್ಳುತ್ತಾರೆ? ಅವರ ಅನುಭವಗಳ ಸಂಘರ್ಷಗಳು, ಆಯಾಕಾಲದ ಸಾಂಸ್ಕೃತಿಕ ಬದುಕನ್ನು ಕಟ್ಟಿ ಕೊಡುವುದರಲ್ಲಿ ಹೇಗೆ ಸಹಕಾರಿಯಾಗಿದೆ? ಎನ್ನುವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು.
- ಭೂತಕಾಲದ ಅನುಭವಗಳು ವರ್ತಮಾನವನ್ನು ಸಮೃದ್ಧಗೊಳಿಸುತ್ತವೆ ಎಂಬುದನ್ನು ಆಯ್ದ ಆತ್ಮ ಕಥನಗಳ ಮೂಲಕ ಚರ್ಚಿಸುವುದು.
- ಆತ್ಮ ಕತೆಗಳಲ್ಲಿ ಕತೆ ಕಾದಂಬರಿಗಳ ಕಥನ ಗುಣಗಳು, ಎಳೆಗಳು ಬರುವುದನ್ನು ಗುರುತಿಸುವುದು.

- ವಾಸ್ತವಿಕವಾಗಿ ವ್ಯಕ್ತಿಯ ಜೀವನದ ಅನುಭವಗಳು ಭಿನ್ನವಾದುದು ಮತ್ತು ವಿಶಿಷ್ಟವಾದುದು ಎಂದು ಗುರುತಿಸುವುದು.
- ವ್ಯಕ್ತಿಯ ಅಂತರಂಗ ಹಾಗೂ ಬಹಿರಂಗದ ಲೋಕವನ್ನು ಪರಿಶೀಲಿಸುವುದು ಹಾಗೂ ವರ್ತಮಾನದ ಬೆಳಕಿನಲ್ಲಿ ಮೌಲ್ಯಮಾಪನ ಮಾಡಲು ಪ್ರಯತ್ನಿಸುವುದು.
- ಆತ್ಮ ಕತೆಗಳನ್ನು ಬರೆದವರ ಸತ್ಯಕತೆ ಎಂದು ತಿಳಿಯಬೇಕೆ? ತಿಳಿಯಬಾರದೆ? ಎಂಬುದನ್ನು ಶೋಧ ಮಾಡುವುದು.
- ಸಮಾಜದಲ್ಲಿ ವ್ಯಕ್ತಿಯು ತನ್ನ ಆಸ್ಮಿತೆಗಾಗಿ ನಡೆಸಿರುವ ಸಂಘರ್ಷವನ್ನು, ಬದುಕನ್ನು ಕಟ್ಟಿಕೊಡುವ ಅನುಭವಗಳನ್ನು ತಿಳಿಯಲು ಪ್ರಯತ್ನಿಸುವುದು.

## 1.3 ಅಧ್ಯಯನದ ವ್ಯಾಪ್ತಿ.

ಕನ್ನಡ ಸಾಹಿತ್ಯದಲ್ಲಿ ಆತ್ಮ ಕಥನಗಳು ಪ್ರಮುಖವಾದ ಸ್ಥಾನಗಳಿಸಿರುವುದನ್ನು ಗಮನಿಸಬಹುದು, ಆತ್ಮ ಕಥನಗಳ ವಿನ್ಯಾಸಗಳನ್ನು ಕಂಡುಕೊಳ್ಳುವುದಕ್ಕಾಗಿ ಆತ್ಮ ಕಥನಗಳಲ್ಲಿ 'ಕರ್ನಾಟಕ ಕತೆ' ಸಾರಾ ಅಬೂಬಕರ್ ಅವರ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು', ಸಿದ್ದಲಿಂಗಯ್ಯ 'ಊರುಕೇರಿ', ಅನುಪಮ ನಿರಂಜನ ಅವರು 'ನೆನಪು ಸಿಹಿಕಹಿ', ಕುವೆಂಪು ರವರ 'ನೆನಪಿನ ದೋಣಿ' ಪ್ರಭಾನಂದಕುಮಾರ್ ಅವರ 'ಅನುದಿನದ ಅಂತರಗಂಗೆ ಲೋಕದಿಲೋದಿನಗಳ ಜೊತೆಯಲ್ಲಿ ರಹಮತ್ ತರೀಕರೆ ಉಳಿದ/ಇತರ ಆತ್ಮ ಕತೆಗಳಿಗಿಂತ ಯಾವ ರೀತಿ ಭಿನ್ನವಾಗಿದೆ, ವಿಶಿಷ್ಟ ವಿನ್ಯಾಸವನ್ನು ಹೊಂದಿದೆ ಎಂಬುದನ್ನು ತಿಳಿಯಲು ಜೋಳದರಾಶಿ ದೊಡ್ಡನಗೌಡರ 'ನಂದೇ ನಾನೋದಿದೆ' ಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

### 1.4 ಅಧ್ಯಯನದ ಮಹತ್ವ

ಕನ್ನಡದಲ್ಲಿ ಆತ್ಮ ಕತೆಗಳು ಹೊರ ಬಂದಿರುವುದು ತುಂಬ ಕಡಿಮೆಯಾಗಿದ್ದರೂ ಅವು ತಮ್ಮದೇ ಆದ ಮಹತ್ವವನ್ನು ಹೊಂದಿದೆ. ಆತ್ಮ ಕಥನಗಳ ಮೂಲಕ ಅವರ ಅಭಿವ್ಯಕ್ತಿಗೆ ಎದುರಾಗುವ ಅಡೆತಡೆಗಳನ್ನು ಅದು ಕೌಟುಂಬಿಕದ್ದೇ ಆಗಿರಲಿ, ಪರಿಸರದ್ದೆ ಆಗಿರಲಿ, ರಾಜಕೀಯದ್ದೆ ಆಗಿರಲಿ, ಎದುರಿಸಿಕೊಂಡು ನಿವಾರಿಸಿಕೊಂಡು, ನಿಭಾಯಿಸಿಕೊಂಡು, ಮುಂದುವರಿಸುವುದಕ್ಕೆ ಸರಿಯಾದ ದಾರಿಯನ್ನು ಆರಿಸುವಲ್ಲಿ ಆತ್ಮ ಕಥನಗಳು ದಾರಿ ದೀಪವಾಗುತ್ತವೆ.

ನಾವು ಎಲ್ಲಿಂದ ಹೇಗೆ ನಡೆದು ಬಂದಿದ್ದೇವೆ ಇವತ್ತು ಎಲ್ಲಿಗೆ ಬಂದು ಮುಟ್ಟಿದ್ದೇವೆ ಎನ್ನುವುದನ್ನು ತಿಳಿದಾಗ ಮುಂದಿನ ಬೆಳವಣಿಗೆಯ ದಾರಿಯ ಆಯ್ಕೆ ಸುಲಭವಾಗುತ್ತದೆ. ಭೂತಕಾಲದ ಅನುಭವಗಳನ್ನು ವರ್ತಮಾನಕ್ಕೆ ಹೊತ್ತುಕೊಂಡು ಬರುವಲ್ಲಿ ಆತ್ಮ ಕಥೆಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ, ಆತ್ಮ ಕಥೆಗಳು ಬದುಕಿನ ದಾರಿಯನ್ನು ತಿಳಿಯಲು, ಜೀವನದ ಏರುಪೇರುಗಳನ್ನು ತಿಳಿಯಲು ಸಹಾಯಕವಾಗುತ್ತವೆ.

ಒಟ್ಟಿನಲ್ಲಿ ಆತ್ಮ ಕಥನಗಳು ಸಾಹಿತ್ಯದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಹೊಂದಿದ್ದು, ಅಪಾರ ಸಂಖ್ಯೆಯ ಓದುಗರಿಂದ ಮೆಚ್ಚುಗೆ ಪಡೆಯುವದರ ಜೊತೆಗೆ ಮಾದರಿಯಾಗಿರುವುದು ಆತ್ಮ ಕತೆಗಳ ಮಹತ್ವನ್ನು ತಿಳಿಸುತ್ತದೆ.

### 1.5 ಅಧ್ಯನದ ವಿಧಾನ/ ವೈಧಾನಿಕತೆ :

1. ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಣೆ ಅವುಗಳನ್ನು ವಿಶ್ಲೇಸುವುದು.
2. ಸಂಶೋಧನ ಅಧ್ಯಯನಕ್ಕೆ ಮೂಲ ಪಠ್ಯಗಳೆ ಆಧಾರಗಳಾಗಿವೆ. ಈ ಪಠ್ಯಗಳ ಆತ್ಮಚರಿತ್ರೆಗೆ ಪೂರಕವಾಗಿವೆ.
3. ಪೂರಕವಾದ ಆತ್ಮಕಥೆಗಳಲ್ಲಿ ಚರ್ಚಿಸಿ ಹೊಸಲೋಕ ಸಾಹಿತ್ಯ ಸೃಷ್ಟಿಸುವುದಕ್ಕೆ ಸಹಾಯುವಾಗಿದೆ.
4. ಈ ಅಧ್ಯಯನದಲ್ಲಿ ಬಹುಶಿಸ್ತಿನ ಹಾಗೂ ಅಂತರ ಶಿಸ್ತಿನ ವೈದಾನಿಕತೆ ಬಳಸಲಾಗಿದೆ.

# ಅಧ್ಯಾಯ – 2

## 2.1. ಆತ್ಮಕಥೆಯ ಪರಿಕಲ್ಪನಾತ್ಮಕ ಚರ್ಚೆ

ಸಿದ್ಧಲಿಂಗಯ್ಯನವರ ಆತ್ಮಕಥನ 'ಊರುಕೇರಿ' ಕೃತಿಯ ಬಗ್ಗೆ ಮಾತನಾಡಿದ್ದೆ. ಅದರಲ್ಲಿ, ಅವರು ಬಾಲ್ಯದಲ್ಲಿ ಅನುಭವಿಸಿದ್ದ ಬಡತನ, ಬಳಲಾಟ, ಅವಮಾನಗಳನ್ನು, ಎದುರಿಸಿದ್ದ ಸಂಕಟ–ಸಂದಿಗ್ಧಗಳನ್ನು ಕುರಿತು ಬರೆದಿದ್ದಾರೆ. ಅವನ್ನು ಅನುಭವಿಸುತ್ತಿದ್ದಾಗ ಅದನ್ನು ಪ್ರಕಟಿಸಲು ಅವರಿಗೆ ಮುಜುಗರ ಸಂಕೋಚಗಳಿದ್ದವು. ಆ ಆತ್ಮಕತೆಯ ಪುಟಗಳಲ್ಲಿ ಕಲ್ಲುಮುಳ್ಳು, ಹಾದಿ–ಬೀದಿ ಚರಂಡಿ, ಕೆಸರು–ಕೊಚ್ಚೆ, ನೋವು–ಹಿಂಸೆ ಇವೆ ತುಂಬಿವೆ. ಆದರೆ ಅವನ್ನು ಕುರಿತು ಬರೆಯುವಾಗ ಸಿದ್ಧಲಿಂಗಯ್ಯನವರು ಆ ಸ್ಥಿತಿಯಲ್ಲಿ ಇಲ್ಲ. ಈ ಅಂಶವು ನನಗೆ ಆತ್ಮ ಕಥೆಗಳ ಬಗ್ಗೆ ಕುತೂಹಲ ಮತ್ತು ಆಸಕ್ತಿಯನ್ನು ಮೂಡಿಸಿತು. ನಂತರ ಇನ್ನು ಕೆಲವು ಆತ್ಮ ಕಥೆಗಳನ್ನು ಓದಿದೆ. 'ಊರುಕೇರೆ' ಕೃತಿಯಲ್ಲಿದ್ದ ತಾತ್ವಿಕ ವಿನ್ಯಾಸ ಮತ್ತಷ್ಟು ಗಟ್ಟಿಯಾಗತೊಡಗಿತು. ಹಾಗಾಗಿ ಕನ್ನಡದಲ್ಲಿ ಪ್ರಕಟವಾಗಿರುವ ಆತ್ಮಕಥೆಗಳನ್ನು ಕುರಿತು ಅಧ್ಯಯನ ಮಾಡಬೇಕೆನಿಸಿತು.

ಕನ್ನಡದಲ್ಲಿ ಪ್ರಕಟವಾಗಿರುವ ಎಲ್ಲಾ ಆತ್ಮ ಕಥೆಗಳ, ಎಲ್ಲಾ ಮಾಹಿತಿಗಳನ್ನು ಯಾಂತ್ರಿಕವಾಗಿ ಸಂಕಲಿಸುವುದು ಉಚಿತವೆನಿಸಲಿಲ್ಲ. ಅಂಥದೊಂದು ಪ್ರಯತ್ನ ವಿವರಗಳ ಭಾರದ ಜಡ ಕೃತಿಯಾದೀತು ಎಂಬ ಭಯ ಕಾಡಿತು. ಈ ಅಪಾಯದಿಂದ ಪಾರಾಗಲು ಆತ್ಮ ಕಥೆಗಳ ಒಳಜಗತ್ತೆ ಕೆಲವು ದಾರಿಗಳನ್ನು ತೋರಿಸಿತು. ಅದೇನೆಂದರೆ, ಬಹುತೇಕ ಆತ್ಮ ಕಥೆಗಳಲ್ಲಿ ಸಾಮಾನ್ಯವಾದ ಕೆಲವು ಅಂಶಗಳೂ ಇವೆ. ಜೊತೆಗೆ ಆಯಾ ಆತ್ಮ ಕಥನಕಾರರಿಗೆ ಅನ್ವಯಿಸಿದಂತೆ ನಿರ್ದಿಷ್ಟವಾದ ಕೆಲವು ಅಂಶಗಳೂ ಇವೆ. ಆ 'ಸಾಮಾನ್ಯ'ವಾದ ಅಂಶಗಳಿಗೆ ಸಾಮಾಜಿಕ ವೆನ್ನಬಹುದಾದ ಆಯಾಮವಿದೆ. ಈ ಆಯಮವು ಸಮಕಾಲೀನವಾದ ಶೈಕ್ಷಣಿಕ–ಸೈದ್ಧಾಂತಿಕ ಗಂಭೀರ ಚರ್ಚೆಯನ್ನು ಹುಟ್ಟುಹಾಕುವಂತಿದೆ.

ಆತ್ಮ ಕಥೆಗಳನ್ನು ಯಾಕೆ ಬರೆಯುತ್ತಿದ್ದಾರೆ? ಆತ್ಮ ಕಥೆಗಳಲ್ಲಿ ಏನನ್ನು ಬರೆದಿದ್ದಾರೆ? ಮತ್ತು ಹೇಗೆ ಬರೆದಿದ್ದಾರೆ? ಈ ಮುಂತಾದ ಪ್ರಶ್ನೆಗಳು ಇಲ್ಲಿನ ಚರ್ಚೆಯನ್ನು ಬಗೆಬಗೆಯಾಗಿ ಪ್ರಚೋದಿಸಿವೆ ಮತ್ತು ಪ್ರಭಾವಿಸಿವೆ. ಅಧ್ಯಯನಕ್ಕೆ ವಿಭಿನ್ನ ಆಯಾಮಗಳನ್ನು ನೀಡಿವೆ.

ಈ ಶತಮಾನದ ಉದ್ದಕ್ಕೂ ಕರ್ನಾಟಕದ ಬೇರೆ ಬೇರೆ ವರ್ಗದ ಸಮುದಾಯದ ಜನ ಅನುಭವಿಸಿರುವ ಬಡತನ, ಎದುರಿಸಿರುವ ಜಾತಿಯ ಸಮಸ್ಯೆ, ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಅಸಮಾನವಾಗಿ ಹರಡಿದ್ದ ಸ್ವಾತಂತ್ರ್ಯ ಚಳುವಳಿ ಇವೇ ಮುಂತಾದ ವಿಷಯಗಳ ಬಗ್ಗೆ ವಿಭಿನ್ನ ರೂಪದ ಚಿತ್ರಣಗಳಿವೆ. ಈ ಚಿತ್ರಣಗಳಲ್ಲಿ ಸಮಕಾಲೀನ ಒತ್ತಡಗಳು, ಸಾಂಸ್ಕೃತಿಕವಾದ ಅತಿ ಮಹತ್ವದ ಕುತೂಹಲಗಳು ಮತ್ತು ವಿಶಿಷ್ಟತೆಗಳು ಅಡಗಿವೆ.

ಯಾವುದೇ ಬರಹಗಾರರಿಗೆ ತಾನು ಬರೆಯಲು ಕೆಲವು ಒತ್ತಾಸೆಗಳಿರುತ್ತವೆ. ಬರಹಗಾರರ ಸಾಮಾಜಿಕ ಹಿನ್ನೆಲೆ ಮತ್ತು ಬರೆಯುವ ವಸ್ತುವಿಷಯಕ್ಕೆ ಸಂಬಂಧಿಸಿ ಈ ಒತ್ತಾಸೆ ಬೇರೆ ಬೇರೆ ಸ್ವರೂಪದಲ್ಲಿರುತ್ತದೆ. ಬರಹಗಾರರಿಗೆ ತನ್ನ ಒತ್ತಾಸೆ ಯಾವುದು ಎಂದು ವಾಚ್ಯವಾಗಿ ಹೇಳಿಕೊಳ್ಳಲು ಎಲ್ಲಾ ಬಗೆಯ ಬರವಣಿಗೆಯಲ್ಲೂ ಮುಕ್ತತೆ ಇರುವುದಿಲ್ಲ. ಹಾಗಾಗಿ ಅಂತಹ ಬರವಣಿಗೆಯನ್ನು ಕುರಿತು ಅಧ್ಯಯನದಲ್ಲಿ ಬರಹಗಾರರ ಒತ್ತಾಸೆಯನ್ನು ಕುರಿತು ಪ್ರತ್ಯೇಕವಾಗಿ ಚರ್ಚಿಸುವ ಪ್ರಮೇಯ ಬರುವುದಿಲ್ಲ. ಆದರೆ ಆತ್ಮ ಕಥೆಗಳಲ್ಲಿ ಆತ್ಮ ಕಥನಕಾರರು 'ತಾನು ಯಾಕೆ ಇದನ್ನು ಬರೆದೆ' ಎಂಬುದನ್ನು ಸ್ವತಃ ಹೇಳಿಕೊಂಡಿದ್ದಾರೆ. ಬೇರೆ ಬಗೆಯ ಬರವಣಿಗೆಯಲ್ಲಿ ಬರಹಗಾರರು ಈ ಪ್ರಶ್ನೆಯನ್ನು ಎದುರಿಸುವ ಪರಿ ಬೇರೆ. ಆದರೆ ಆತ್ಮ ಕಥೆ ಬರೆಯುವ ಸಂದರ್ಭದಲ್ಲಿ ಈ ಪ್ರಶ್ನೆ ಪ್ರಜ್ಞಾಪೂರ್ವಕವಾಗಿ ಕಾಡಿದಂತಿದೆ. ಇದಕ್ಕೆ ಉತ್ತರವೆಂಬಂತೆ ಆತ್ಮ ಕಥನಕಾರರು ತಮ್ಮ ಬರವಣಿಗೆಯ ಉದ್ದೇಶವನ್ನು ಹೇಳಿದ್ದಾರೆ. ಇಂಥಾ ಒಂದು ಪ್ರಶ್ನೆ, ಒಂದು ಸಮಸ್ಯೆ ಬರಹಗಾರರನ್ನು ಯಾಕೆ ಕಾಡುತ್ತದೆ? ಎಂಬುದು ಆಸಕ್ತಿಯ ವಿಷಯ.

ಒಬ್ಬ ವ್ಯಕ್ತಿಯ ಜೀವನ ವಿವರಗಳನ್ನು ಮತ್ತೊಬ್ಬ ವ್ಯಕ್ತಿ ಬರೆದಾಗ ಜೀವನಚರಿತ್ರೆ ಎನಿಸಿಕೊಳ್ಳುತ್ತದೆ. ಒಬ್ಬ ವ್ಯಕ್ತಿಯು ತನ್ನ ಜೀವನ ವಿವರಗಳುನ್ನು ತಾನೇ ಬರೆದುಕೊಂಡಾಗ ಆತ್ಮ ಚರಿತ್ರೆ ಎನಿಸಿಕೊಳ್ಳುತ್ತದೆ. ಜೀವನ ವಿವರಗಳ ಆಯ್ಕೆಯಲ್ಲಿ, ಜೋಡಿಸುವಿಕೆಯಲ್ಲಿ, ನಿರೂಪಣೆಯಲ್ಲಿ ಹಾಗೂ ಮಂಡನೆಯಲ್ಲಿ ಜೀವನಚರಿತ್ರೆಗೂ ಆತ್ಮ ಚರಿತ್ರೆಗೂ ವ್ಯತ್ಯಾಸವಿದೆ. ಆತ್ಮ ಕಥೆಯ ಒತ್ತಾಸೆಯ ಮೂಲ ವ್ಯಕ್ತಿ ನೆಲೆಯದೊ ಅಥವಾ ಸಮುದಾಯ ನೆಲೆಯದೊ ಎಂಬ ಪ್ರಶ್ನೆಯೂ ಎದುರಾಗುತ್ತದೆ. ಸಮುದಾಯ ನೆಲೆಯದಾಗಿದ್ದರೆ ಅದು ಸಮುದಾಯದ ಅಪೇಕ್ಷೆಯೇ ಆಗಿರುತ್ತದೆ. ವ್ಯಕ್ತಿ ನೆಲೆಯದಾಗಿದ್ದಾರೆ ಅದು ವ್ಯಕ್ತಿಯ ಅಪೇಕ್ಷೆಯಾಗಿರುತ್ತದೆ. ಆದರೆ ವ್ಯಕ್ತಿಯ ಅಪೇಕ್ಷೆ ಎಂಬುದನ್ನೂ ಕೂಡ ಸಮಾಜವೇ ಸೃಷ್ಟಿಸುತ್ತದೆ. ಹಾಗಾಗಿ ತನ್ನ ಬಗ್ಗೆ ತಾನು ಹೇಳಿಕೊಳ್ಳಬೇಕೆಂಬ ಹಂಬಲವು ಒಂದು ಹಂತದಲ್ಲಿ ವ್ಯಕ್ತಿ ಮೂಲದ್ದು ಎಂದು ಕಾಣಿಸಿದರೂ ಮತ್ತೊಂದು ದೃಷ್ಟಿಯಲ್ಲಿ ಅದು ಸಮಾಜ ಮೂಲದ್ದೂ ಆಗಿರುತ್ತದೆ ಅಥವಾ ಇವರೆಡೂ ಪರಸ್ಪರ ಒಂದನ್ನೊಂದು ಅವಲಂಬಿಸಿರುತ್ತವೆ.

ಆತ್ಮ ಕಥನಕಾರರು ತಮ್ಮ ಬರವಣಿಗೆಯ ಉದ್ದೇಶದ ಬಗ್ಗೆ ಹೇಳಿರುವ ಮಾತುಗಳನ್ನು ಉಲ್ಲೇಖಿಸುತ್ತಾ ಆ ಬಗ್ಗೆ ಚರ್ಚೆಯನ್ನು ಬೆಳೆಸಬಹುದು. ಶಿವರಾಮ ಕಾರಂತರು ತಮ್ಮ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ. 'ನನ್ನ ಸಾರ್ವಜನಿಕ ಜೀವನದ ಎರಡೂವರೆ ದಶಕಗಳ ಅವಧಿ ಮುಗಿದ ಹೊತ್ತಿಗೆ ಯಾವುದೋ ಒಂದು ಮನೋಲಹರಿಯಿಂದಾಗಿ ನನ್ನ ಆತ್ಮ ಕಥೆಯನ್ನು ಬರೆಯುವ ಪ್ರಯತ್ನ ಮಾಡಿದೆ. ನನ್ನ ಜೀವನ ವೃತ್ತ ನನ್ನ ಒಬ್ಬಿಬ್ಬರು ಮಿತ್ರರಿಗೆ ಕುತೂಹಳಕಾರಿಯಾಗಿ ಕಂಡುದರಿಂದ, ಅವರು ತಾವು ಅದನ್ನು ಬರೆಯುತ್ತೇವೆಂದು ಉತ್ಸುಕತೆ ತೋರಿಸಿದರು. ನಾನು ಅವರಿಗೆ ಪರಿಹಾಸ ಮಾಡುತ್ತಾ, 'ನೀವು ನನ್ನನ್ನು ಕೊಲ್ಲಬೇಕಿಲ್ಲ! ನನ್ನ ಆತ್ಮ ಹತ್ಯೆಯನ್ನು ನಾನೇ ಮಾಡಿಕೊಳ್ಳುತ್ತೇನೆ' ಎಂದುದುಂಟು. ಅದರಲ್ಲಿ ನನ್ನ ಬದುಕಿಗೆ ಸಂಬಂಧಪಟ್ಟ ವಿದ್ಯಮಾನಗಳನ್ನು ಬರೆದು ಮುಗಿಸಿದೆ'. ಈ ಉಲ್ಲೇಖದಲ್ಲಿ ಶಿವರಾಮಕಾರಂತರು ತಮ್ಮ ಜೀವನ ವಿವರಗಳನ್ನು ಬೇರೆಯವರು ಬರೆದಾಗ ಬಂದೊದಗುವ ಸಮಸ್ಯೆಗಳ ಬಗ್ಗೆ ಎಚ್ಚರ ವಹಿಸಿದ್ದಾರೆ. ಇದರಿಂದ ತನ್ನ ಬಗ್ಗೆ ತಾವೇ ಬರೆದುಕೊಳ್ಳುವ ತೀರ್ಮಾನಕ್ಕೆ ಬಂದಿದ್ದಾರೆ. ತಮ್ಮ ಜೀವನ ವಿವರಗಳನ್ನು

ಬೇರೆಯವರು ಬರೆದಾಗ ಉಂಟಾಗುವ ಸಮಸ್ಯೆಗಳ ಸ್ವರೂಪ ಖಚಿತವಿಲ್ಲ. ಆದರೆ ಆ ಬಗ್ಗೆ ಆತಂಕ ಮಾತ್ರ ವ್ಯಕ್ತವಾಗಿದೆ.

'ಆತ್ಮಕಥೆ ಎಂದರೆ ಪೂರ್ತಿ ವಾಸ್ತವವಾಗಿ ನಡೆದುದರ ಕಥೆ ಎಂದು ಹೇಳಲಾಗದು' ಎಂಬ ನಿಲುವನ್ನು ಮಂಡಿಸಿರುವ ಶ್ರೀರಂಗರು ತಮ್ಮ ಆತ್ಮ ಕಥೆಯ ಉದ್ದೇಶವನ್ನು ಹೀಗೆ ಹೇಳಿಕೊಂಡಿದ್ದಾರೆ. 'ಸಾಹಿತ್ಯ ವಿಮರ್ಶಕರು ಕಥೆಯನ್ನು ಲಲಿತ ಸಾಹಿತ್ಯ ಎಂದೆಣಿಸುವರು. ಆತ್ಮಕಥೆ ಮತ್ರ ಲಲಿತವಲ್ಲದ ಸಾಹಿತ್ಯ ವಿಭಾಗ ಎಂದು ಅವರ ಅಭಿಪ್ರಾಯ. ಕಥೆಯು ಇನ್ನೊಬ್ಬರನ್ನು ಕುರಿತುದು. ಆತ್ಮಕಥೆ ತನ್ನನ್ನ (ಬರೆದವನನ್ನು) ಕುರಿತುದು ಎಂಬುದಕ್ಕಾಗಿ ಈ ಭೇದವಿರಬಹುದೆ? ಇನ್ನೊಬ್ಬರ ಬಗ್ಗೆ ಕಲ್ಪನಾಮೂಲ ಜ್ಞಾನ ಹೆಚ್ಚು. ತನ್ನ ಬಗ್ಗೆ ಅನುಭವ ಮೂಲ ಜ್ಞಾನ ಹೆಚ್ಚು ಎಂದು ಹೇಳಬಹುದೆ? ಹಾಗೆ ನೋಡಿದರೆ ಕಥೆಯಲ್ಲಿರುವಂತೆ ಆತ್ಮ ಕಥೆಯಲ್ಲಿಯೂ ಕಲ್ಪನೆಗೆ ಇಲ್ಲವೆ ಅಪ್ರತ್ಯಕ್ಷ ಅನುಭವಕ್ಕೆ ಅವಕಾಶವಿದೆ. ತನ್ನ ಬಾಲ್ಯದ ಬಗ್ಗೆ ಬರೆಯುವ ಎಪ್ಪತ್ತರ ಸಮೀಪದ ವಯಸ್ಸಿನ ನನ್ನಂತಹ ಬರಹಗಾರನಿಗೆ ಬಾಲ್ಯದ ಪ್ರತ್ಯಕ್ಷ ಅನುಭವಕ್ಕಿಂತ ಅಸ್ಪಷ್ಟ ಸ್ಮರಣೆಗಳ ಆಧಾರವೇ ಹೆಚ್ಚಾಗಿರಬಹುದಾಗಿದೆ. ಅದರಂತೆಯೇ ಎರಡರಲ್ಲೂ ಸತ್ಯದ ಇಲ್ಲವೆ ಪ್ರತ್ಯಕ್ಷದ ಅಂಶವೂ ಸಾಕಷ್ಟಿದೆ ಎನ್ನಬಹುದಲ್ಲ? ಇನ್ನೊಬ್ಬರ ಬಗ್ಗೆ ಬೆರೆಯುವಾಗ ಪ್ರತಿಷ್ಠೆಯ ಬಗ್ಗೆ  ಅಷ್ಟೊಂದು ಹೊಣೆಗಾರಿಕೆ ಎನ್ನಿಸದೆ ಕಟುವಾದ ಸತ್ಯವನ್ನೊ ಬರೆಯಬಲ್ಲವನು ತನ್ನ ಬಗ್ಗೆ ಬರೆಯುವಾಗ ಪ್ರತಿಷ್ಠೆಯನ್ನು ಕಾಯ್ದುಕೊಳ್ಳುವುದಕ್ಕೆ ಕೆಲವೊಮ್ಮೆ ಕಟುವಾದ ಸತ್ಯವನ್ನು ಬಚ್ಚಿಡಲೂ ಯತ್ನಿಸಬಹುದಲ್ಲ. ...........ಆತ್ಮ ಕಥೆಯನ್ನು ಬರೆಯುವಾಗ ಕಲ್ಪನಾಶಕ್ತಿಯನ್ನು ಪೂರ್ತಿಯಾಗಿ ಬದಿಗಿಟ್ಟಿದ್ದೇನೆ ಎಂದೂ ಹೇಳಲಾರೆ.

ಶ್ರೀರಂಗದ ಮೇಲಿನ ಮಾತುಗಳಲ್ಲಿ ಆತ್ಮ ಚರಿತ್ರೆಯ ವಿವರಗಳು ವಾಸ್ತವದ ವರದಿಯಾಗಿರಬೇಕಿಲ್ಲ ಎಂಬುದು ವ್ಯಕ್ತವಾಗಿದೆ. ಇದೆ ಧೋರಣೆಯನ್ನು ಹೋಲುವ ಎಸ್.ಎಲ್.ಭೈರಪ್ಪನವರ ಮಾತುಗಳನ್ನು ಗಮನಿಸಬೇಕು. 'ಆತ್ಮ ವೃತ್ತಾಂತ ಎಂದರೆ ವಾಸ್ತವವಾಗಿ ನಡೆದದ್ದನ್ನು ನೆನಪಿನ ಅಥವಾ ದಿನಚರಿ, ಪತ್ರ ಮೊದಲಾದ ಇತರ ದಾಖಲೆಗಳದ್ದರೆ ಅವುಗಳ ಆಧಾರವಿದ್ದಷ್ಟನ್ನು ಮಾತ್ರ ಬರೆಯುವುದು. ಕಾದಂಬರಿಯಂತೆ ಅಲ್ಲಿ ಬಹು ಆಯಾಮದ ಕಲ್ಪನೆಗೆ ಸ್ಥಾನವಿಲ್ಲ. ರಸದ ಒಸರಾಟಕ್ಕೂ ಪ್ರಾಧಾನ್ಯವಿಲ್ಲ. ಅಲ್ಲಿಯೂ

ಕೆಲವೆಡೆ ರಸ ಜಿನುಗಬಹುದು. ಆದರೆ ಜೀವನ ವಾಸ್ತವತೆಯ ರಸಸೃಷ್ಟಿಯ ವಿಭಾಗಗಳ ಮಾರ್ಗವನ್ನು ಹಿಡಿದು ಸಾಗುವುದಿಲ್ಲ.

'ಆಯ್ಕೆಯಿಲ್ಲದೆ ರೂಪವಿಲ್ಲ; ಮಹಾತ್ಮ ಗಾಂಧಿಯವರು ಬರೆದ ಆತ್ಮ ವೃತ್ತಾಂತದಲ್ಲಿ ಕೂಡ ವಾಸ್ತವತೆಯ ಆಯ್ದ ಅಂಶಗಳಿವೆಯೇ ಹೊರತು ಸಮಸ್ತ ಅಂಶಗಳೂ ಇಲ್ಲ. ಅವರು ಸುಳ್ಳು ಹೇಳಿಲ್ಲ. ಆದರೆ ವಾಸ್ತವ ಸಮಸ್ತವನ್ನೂ ಅವಲಂಬಿಸುತ್ತದೆ. ಎಪ್ಪತ್ತರ ಮನಸ್ಥಿತಿ ದೃಷ್ಟಿದರ್ಶನಗಳು ಐವತ್ತೇಳರದಕ್ಕಿಂತ ಬೇರೆಯಾಗಿರುವುದು ಸಹಜವೇ. ಶಬ್ದಗಳ ಆಯ್ಕೆಯಿಂದ ಹಿಡಿದು ವಿವರಗಳನ್ನು ರಚಿಸುವವರೆಗೆ. ಎಂದೋ ನಡೆದ ಸಂಗತಿಯನ್ನು ಇಂದು ನೆನಪಿನಲ್ಲಿ ಎಬ್ಬಿ ತೆಗೆದು ಬರಹಗಾರನ ಇಡೀ ಜೀವನದಿಂದ ಸಂಸ್ಕಾರಗೊಂಡ ಭಾಷೆಯಲ್ಲಿ ವ್ಯಕ್ತಪಡಿಸುವುದೆಂದರೆ ಕಡಿಮೆ ಆಯ್ಕೆಯಾಗಿರುತ್ತದೆಯೇ? ಕಡಿಮೆ ದರ್ಶನ ಪಲ್ಲಟವಾಗಿರುತ್ತದೆಯೇ? ಅನುಭವವನ್ನು ನೆನಪಿಸಿ ದಾಖಲಿಸುವಾಗ ನಾವು ಬಳಸುವ ಶಬ್ದಗಳಲ್ಲಿ ಆಗುವ ವ್ಯತ್ಯಾಸದಿಂದ ಆ ಅನುಭವದ ಬಣ್ಣ ಅರ್ಥ ಮಹತ್ವಗಳೇ ಬದಲಾಗಿ ಹೊಸಹುಟ್ಟು ಪಡೆದಿರುತ್ತದೆ'.

ಮೇಲಿನ ಉಲ್ಲೇಖಗಳಲ್ಲಿ ಮಂಡಿತವಾಗಿರುವ ಮುಖ್ಯ ಸಂಗತಿಯೇನೆಂದರೆ, ಆತ್ಮ ಕಥೆ ಎಂಬುದು ಕೇವಲ ಜಡಸಾಮಗ್ರಿಗಳ ಜಡೆ ಸಂಕಲನವಲ್ಲ. ನಿರೂಪಕನ ನಿರೂಪಣಾ ಸಾಮರ್ಥ್ಯಕ್ಕೆ ಅನುಗುಣವಾಗಿ ಜೀವನ ವಿವರಗಳು ಜಡವಾಗಿ ಮಂಡಿತವಾಗದೆ ಪ್ರಕ್ರಿಯಾತ್ಮಕ ನಿರಂತರ ಬೆಳವಣಿಗೆಯಲ್ಲಿ ಮಂಡಿತವಾಗುತ್ತವೆ ಎಂಬುದು. ತತ್ವಶಾಸ್ತ್ರೀಯ ನೆಲೆಯಲ್ಲಿ ಹೇಳುವುದಾದರೆ ಸಮಾಜದ ಯಾವುದೇ ವಸ್ತು, ವಿಷಯ, ಸಂಗತಿ ಖಂಡಿತಾ ಜಡವಾದುದಲ್ಲ. ಅದಕ್ಕೆ ನಿರಂತರತೆ ಇರುತ್ತದೆ. ಬೆಳವಣಿಗೆ ಇರುತ್ತದೆ. ಹಾಗಾಗಿ ಆತ್ಮ ಕಥೆಗಳಲ್ಲಿ ಜೀವನ ವಿವರಗಳು ಎಷ್ಟು ದಾಖಲಾಗಬೇಕು- ಎಂಥವು ದಾಖಲಾಗಬೇಕು ಎಂಬುದು ಆಯ್ಕೆಯ ಪ್ರಶ್ನೆಯಾಗುತ್ತದೆ. ಅದೇ ಕಾಲಕ್ಕೆ ಆಯ್ದ ಸಂಗತಿಗಳನ್ನು ಹೇಗೆ ನಿರೂಪಿಸಬೇಕು, ಹೇಗೆ ಮಂಡಿಸಬೇಕು ಎಂಬುದು ನಿರೂಪಣೆಯ ಪ್ರಶ್ನೆಯಾಗಿರುತ್ತದೆ. ಹಾಗೆ ನೋಡಿದರೆ ಇವೆರಡೂ ಒಂದರಿಂದ ಒಂದು ಪ್ರತ್ಯೇಕವಾಗಿರದೆ ಒಂದನ್ನೊಂದು ನಿರಂತರವಾಗಿ ಅವಲಂಬಿಸಿರುತ್ತವೆ.

ಆದರಿಂದ ಆಯ್ದು ಸಂಗತಿಗಳನ್ನು ನಿರೂಪಿಸುವಾಗ ನಿರೂಪಕನ ಭಾಷಾ ಪ್ರೌಢಿಮೆಯ ಹಿಡಿತ ಮತ್ತು ಅದನ್ನು ಕಲಾತ್ಮಕವಾಗಿ ಸೃಷ್ಟಿಸುವ ಕೌಶಲ್ಯಗಳೂ ಪ್ರಧಾನವಾಗಿ ಕೆಲಸ ಮಾಡುತ್ತವೆ.

ಮೇಲಿನ ಚರ್ಚೆಗೆ ಪೂರಕವಾದ ಶ್ರೀರಂಗರ ಮಾತುಗಳನ್ನು ಗಮನಿಸಬಹುದು. 'ಆತ್ಮ ಕಥೆಯನ್ನು ಬರೆಯುವಾಗ, ಕಲ್ಪನಾಶಕ್ತಿಯನ್ನು ಪೂರ್ತಿಯಾಗಿ ಬದಿಗಿಟ್ಟಿದ್ದೇನೆ ಎಂದೂ ಹೇಳಲಾರೆ. ಆದರೆ ಸಾಹಿತ್ಯದಲ್ಲಿ ಕಲ್ಪನೆಯ ಸಾಧನತ್ವ ಅನೇಕ ಮುಖವಾಗಿದೆ. ವಸ್ತುವನ್ನು ನಿರ್ಮಿಸುವುದಕ್ಕೆ ಕಲ್ಪನೆ ಅಗತ್ಯವಿದ್ದಂತೆ, ಅದನ್ನು ಪ್ರತಿಪಾದಿಸುವ ಶೈಲಿಯನ್ನು ಕಂಡುಕೊಳ್ಳಲೂ ಕಲ್ಪನೆ ಅಗತ್ಯವಿದೆ. ಒಂದು ನಾಟಕವು 'ಸಾಮಾಜಿಕ' ಎನ್ನಿಸಿದರೂ ಅಲ್ಲಿ ವಿಷಯಗಳನ್ನು ಸಮಾಜದಲ್ಲಿ ಇದ್ದಂತೆಯೆ ಇರದೆ, ಕೆಲವನ್ನೆ ಆಯ್ದು, ಅವನ್ನು ವಿಶಿಷ್ಟ ರೀತಿಯಲ್ಲಿ ಹೊಂದಿಸುವುದಿಲ್ಲವೆ? ಇದಕ್ಕೆ ಶೈಲಿ ಇಲ್ಲವೆ ತಂತ್ರ ಎನ್ನಬಹುದು. ಈ ಶೈಲಿ ಇಲ್ಲವೆ ತಂತ್ರವನ್ನು ಕಲ್ಪನೆಯಿಂದಲೇ ಕಂಡುಕೊಳ್ಳಬೇಕಾಗುವುದಲ್ಲದೆ ಯಾವ ಪಠ್ಯಪುಸ್ತಕದಿಂದ ಅಲ್ಲ'. ಯಾವುದೇ ಬರವಣಿಗೆಯಲ್ಲಿ ವಸ್ತು ನಿರ್ಮಿತಿಯೂ, ಶೈಲಿ ಸೃಷ್ಟಿಯೂ ಏಕಕಾಲಕ್ಕೆ ನಡೆಯುತ್ತಿರುತ್ತದೆ ಮತ್ತು ಇವೆರಡನ್ನು ಸಮಕಾಲೀನ ಬದುಕಿನ ಸಂಕೀರ್ಣಗಳು ಪ್ರಭಾವಿಸುತ್ತಿರುತ್ತವೆ, ಪ್ರೇರೇಪಿಸುತ್ತಿರುತ್ತವೆ. ಹಾಗಾಗಿ ಯಾವುದೇ ಕಾಲದ ವಸ್ತು ವಿಷಯವಿರಲಿ, ಘಟನೆಯಿರಲಿ, ಸಂಗತಿ ಇರಲಿ, ಅವು ಪುರಾತನ ಕಾಲದಲ್ಲಿ ಭೂಮಿಯಲ್ಲಿ ಅಡಗಿದ್ದ ನಾಣ್ಯಗಳನ್ನೋ, ಇನ್ನಾವುದೋ ವಸ್ತುಗಳನ್ನೋ ಹೊರತೆಗೆದಂತೆ ನಿರ್ಜೀವವಾಗಿ ಪ್ರಕಟವಾಗುವುದಿಲ್ಲ. ಬದಲಾಗಿ ಬರಹಗಾರನ ಸೈದ್ಧಾಂತಿಕತೆ, ಕಲಾತ್ಮಕತೆ, ದಾರ್ಶನಿಕತೆ ಮತ್ತು ವರ್ತಮಾನದ ಬದುಕಿನ ಆಗುಹೋಗುಗಳ ಸಂಕೀರ್ಣ ಒತ್ತಡಗಳು ಇವೆಲ್ಲವುಗಳ ಒಟ್ಟಂದದಲ್ಲಿ ಅವು ಹೊಸಹುಟ್ಟನ್ನು ಪಡೆದಿರುತ್ತವೆ; ಮರುಸೃಷ್ಟಿ ಯಾಗಿರುತ್ತವೆ.

ಈ ಮರುಸೃಷ್ಟಿಯ ಅಥವಾ ಹೊಸ ಸೃಷ್ಟಿಯ ಸಾಧ್ಯತೆ ಮತ್ತು ಸವಾಲುಗಳನ್ನು ಎಲ್ಲಾ ರೀತಿಯ ಬರವಣಿಗೆಯಲ್ಲೂ ಲೇಖಕರು ಸಾಮಾನ್ಯವಾಗಿ ಎದುರಿಸುತ್ತಾರೆ. ಆದರೆ ವಿಶೇಷವಾಗಿ ಮತ್ತು ನಿರ್ದಿಷ್ಟವಾಗಿ ಆತ್ಮ ಕಥೆಯ ಬರವಣಿಗೆಯಲ್ಲಿ ಎದುರಿಸುತ್ತಾರೆ. ಯಾಕೆಂದರೆ, ಆತ್ಮ ಕಥೆಗಳನ್ನು, ಬರೆದವನ ವೈಯಕ್ತಿಕ ದಿನಚರಿಯ ಸಂಗತಿಗಳ ಸಂಕಲನವೆಂದೋ, ಅಥವಾ ಅವನ ಕೇವಲ ವೈಯಕ್ತಿಕ ವಿಷಯಗಳ ಕ್ರಮಾಗತ ಪಟ್ಟಿಯೆಂದೋ ಸರಳೀಕರಿಸಿಬಿಡುವ

ಸಾಧ್ಯತೆಗಳಿವೆ ಇಲ್ಲವೆ ಅಪಾಯಗಳಿವೆ. ಈ ಬಗೆಯ ಸರಳೀಕರಣದಿಂದ ಆತ್ಮ ಕಥನಕಾರನೂ ಅದರ ಓದುಗನೂ ಏಕಕಾಲಕ್ಕೆ ಹೊರಗೆ ಬರಬೇಕಾಗಿದೆ. ಆದರೆ ಇದು ಅಷ್ಟು ಸುಲಭದ ಕೆಲಸವಲ್ಲ. ಅದರಿಂದಲೇ ಅನೇಕ ಆತ್ಮ ಕಥನಕಾರರು, ಈ ಶತಮಾನದ ಆರಂಭದ ತಮ್ಮ ಅನುಭವಗಳನ್ನು, ಸಮಾಜವನ್ನು ಕುರಿತು ಬದುಕನ್ನು ಕುರಿತು ತಮ್ಮ ಪ್ರತಿಕ್ರಿಯೆಗಳನ್ನು ಈ ಶತಮಾನವದ ಅಂಚಿನಲ್ಲಿ ಬರೆದು ಪ್ರಕಟಿಸುವಾಗ, ಒಂದು ವಿಚಿತ್ರವಾದ ತಾಕಲಾಟಕ್ಕೆ ಒಳಗಾಗಿದ್ದಾರೆ. ತಮ್ಮ ಪ್ರತಿಕ್ರಿಯೆಗಳಲ್ಲಿ ಎಷ್ಟನ್ನು ಪ್ರಕಟಿಸಬೇಕು ಎಂಥವನ್ನು ಪ್ರಕಟಿಸಬೇಕು ಮತ್ತು ಅವನ್ನು ಹೇಗೆ ಮಂಡಿಸಬೇಕು ಎಂಬ ತೀವ್ರ ಒತ್ತಡಕ್ಕೆ ಒಳಗಾಗಿದ್ದಾರೆ. ಯಾಕೆಂದರೆ ಆತ್ಮ ಚರಿತ್ರೆ ಎಂದಾಕ್ಷಣ ಕೇವಲ ಭೂತಕಾಲದ ನೆನಪುಗಳನ್ನು ಯಾವುದೋ ಕ್ರಮಗದಲ್ಲಿ ಪೋಣಿಸುವ ತಾಂತ್ರಿಕ ಕೆಲಸವಲ್ಲ. ನೆನಪುಗಳು, ವಸ್ತುವಿಷಯಗಳು, ಭೂತಕಾಲದವಾಗಿದ್ದರೂ, ಅವು ವರ್ತಮಾನದ ಕಠೋರತೆಯ ಕುಲುಮೆಯಲ್ಲಿ ಮಿಂದು ಮೈದಾಳುತ್ತವೆ. ಹಾಗಾಗಿ ಆತ್ಮ ಕಥನಕಾರ ಭೂತಕಾಲದ ನೆನಪುಗಳನ್ನು ವರ್ತಮಾನದ ವಾಸ್ತವ ಗ್ರಹಿಕೆಗಳಾಗಿ ಮಂಡಿಸಲು ಪ್ರಯತ್ನಿಸುತ್ತಾನೆ. ಇದರಿಂದ ಈತ ಭೂತಕಾಲದ ಮತ್ತು ವರ್ತಮಾನದ ವಸ್ತುಸ್ಥಿತಿಯನ್ನು ಏಕಕಾಲಕ್ಕೆ ಗ್ರಹಿಸಬೇಕಾಗುತ್ತದೆ. ಭೂತದ ನೆನಪು ಮತ್ತು ಅವುಗಳ ಆಯ್ಕೆ ಎಷ್ಟು ಮುಖ್ಯವೋ ಅದೇ ರೀತಿ ವರ್ತಮಾನದ ವಸ್ತುಸ್ಥಿಯ ಗ್ರಹಿಕೆಯ ನೆಲೆಗಳೂ ಏಕಕಾಲಕ್ಕೆ ಅಷ್ಟೇ ಮುಖ್ಯವಾಗುತ್ತವೆ. ಬರಹಗಾರರು ವಸ್ತುಸ್ಥಿಯನ್ನು ಹೇಗೆ ಗ್ರಹಿಸುತ್ತಾರೆ, ಅದರ ವಿಧಾನಗಳು ಯಾವುವು ಎಂಬುದರ ಮೇಲೆ ಆತ್ಮ ಕಥೆಯ ಹಂದರ ಸೃಷ್ಟಿಯಾಗುತ್ತದೆ. ವರ್ತಮಾನದ ಚಲನಶೀಲ ಪರಿಸ್ಥಿತಿಯನ್ನು ಅರಿಯಲು, ಗ್ರಹಿಸಲು ಬೇಕಾದ ಪೂರಕ ವಿಧಾನಗಳ ಸೃಷ್ಟಿಯೂ ಇದರಲ್ಲಿ ನಡೆಯುತ್ತದೆ. ಹಾಗಾಗಿ ಗತಕಾಲದ ನೆನಪುಗಳು ತತ್ಕಾಲೀನ ಪರಿಸ್ಥಿತಿಯ ಒತ್ತಡದಲ್ಲಿ ರೂಪಾಂತರ ಪಡೆದು ಮೈದಾಳುತ್ತವೆ; ಮರುಹುಟ್ಟು ಪಡೆಯುತ್ತವೆ.

ಹೀಗಾಗಿ ಆತ್ಮ ಕಥೆಗಳು ತಮ್ಮ ಒಪ್ಪಂದದಲ್ಲಿ ಕೇವಲ ಗತಕಾಲದ ನಿರ್ದಿಷ್ಟತೆಯಲ್ಲಿ ಗಿರಕಿ ಹೊಡೆಯುವ, ವಿಶ್ರಾಂತಿ ಪಡೆಯುವ ಜಡ ಬರಹಗಳಾಗಿರುವುದಿಲ್ಲ. ಲೇಖಕರು ಬದುಕುತ್ತಿರುವ ಸಮಾಜದ ಸಮಾಕಾಲೀನ ಒತ್ತಡಗಳು ಹಾಗೆ ಜಡವಾಗಿರಲು ಬಿಡುವುದಿಲ್ಲ. ಗತವನ್ನು ವರ್ತಮಾನದಲ್ಲಿ ಪರಿಗ್ರಹಿಸುವ ಮತ್ತು ಅದೇ ಕಾಲಕ್ಕೆ ಗತಕಾಲದ ಬೆಳಕಿನಲ್ಲಿ ವರ್ತಮಾನವನ್ನು ವ್ಯಾಖ್ಯಾನಿಸುವ ಮತ್ತು ಮೌಲ್ಯೀಕರಿಸುವ ಸೃಜನಶೀಲವಾದ ಹಾಗೂ

ಸೈದ್ಧಾಂತಿಕವಾದ ಕೆಲಸಗಳು ಏಕಕಾಲಕ್ಕೆ ನಡೆಯುತ್ತಿರುತ್ತವೆ. ಇದರಿಂದಾಗಿ ಆತ್ಮ ಕಥೆಗಳನ್ನು ಒಂದು ಸೃಜನೇತರ ಪ್ರಕಾರವೆಂದು ಬಹುದೊಡ್ಡ ವಿಪರ್ಯಾಸ ಎಂದು ಕಾಣುತ್ತದೆ. ಇತ್ತೀಚಿನ ಗಂಭೀರ ಅಧ್ಯಯನಗಳು ಬರವಣಿಗೆಗಳನ್ನು 'ಸೃಜನಶೀಲ' ಮತ್ತು 'ಸೃಜನೇತರ' ಎಂಬ ಯಾಂತ್ರಿಕ ವಿಂಗಡಣೆಗಳನ್ನು ಅಷ್ಟಾಗಿ ಪರಿಗಣಿಸುತ್ತಿಲ್ಲ. ಎಲ್ಲಾ ಬರವಣಿಗೆಗಳೂ ಒಂದಲ್ಲ ಒಂದು ರೀತಿಯಲ್ಲಿ ಸೃಜನಶೀಲ ಬರವಣಿಗೆಗಳೇ ಆಗಿರುತ್ತವೆ. ಬರವಣಿಗೆಗಳ 'ಸೃಜನಶೀಲ' ಮತ್ತು 'ಸೃಜನೇತರ' ಎಂಬ ವಿಂಗಡಣೆಯ ನೆಲೆಗಳು ಬರಹಗಾರನ ಸೃಜನಶೀಲ ಸಾಮರ್ಥ್ಯ ಮತ್ತು ಸೈದ್ಧಾಂತಿಕ ದಾರ್ಶನಿಕತೆಯನ್ನು ಏಕಕಾಲಕ್ಕೆ ಸರಳೀಕರಿಸಿ ಅಪಮೌಲ್ಯೀಕರಣಗೊಳಿಸಿವೆ. ಅನೇಕ ಆತ್ಮ ಕಥೆಗಳು 'ಸೃಜನೇತರ' ಎಂದು ಕರೆಯಲಾಗುವ ಜಡ ಚೌಕಟ್ಟನ್ನು ಮೀರುವ ಅದಮ್ಯ ತಹತಹವನ್ನು ತಮ್ಮ ಒಡಲೊಳಗೆ ಬಲು ಮಹತ್ವಾಕಾಂಕ್ಷೆಯಿಂದ ಹುದುಗಿಸಿಕೊಂಡಿವೆ. ಇದು ಕೇವಲ ಕಲಾತ್ಮಕತೆಯ ಪ್ರಶ್ನೆಯಾಗಿರದೆ, ಕಲಾತ್ಮಕತೆಯೊಳಗಿರುವ ದಾರ್ಶನಿಕತೆಯ ಅಪೇಕ್ಷೆಯು  ಹೌದು. ಅದೇ ಕಾಲಕ್ಕೆ ಅದು ರಾಜಕೀಯ ಸೈದ್ಧಾಂತಿಕತೆಯ ಒಳತುಡಿತವೂ ಹೌದು. ಅಂದರೆ, ಆತ್ಮ ಕಥೆಗಳ ಬರವಣಿಗೆಯ ಹಿಂದೆ ಇಂಥಾ ಒಂದು ಸೈದ್ಧಾಂತಿಕ ಅಪೇಕ್ಷೆ ತಾನೇ ತಾನಾಗಿ ಅಡಗಿದೆ.

ಮೇಲೆ ಚರ್ಚಿಸಿದ ತಾತ್ವಿಕ ನೆಲೆಗಳನ್ನು ಸಮರ್ಥಿಸುವಂತಹ, ಎ.ಎನ್.ಮೂರ್ತಿರಾವ್ ಅವರ ಮಾತುಗಳನ್ನು ಇಲ್ಲಿ ಉಲ್ಲೇಖಿಸಬೇಕು. 'ಇದನ್ನು ಆತ್ಮ ಕಥೆ ಎಂದು ಕರೆಯಬಹುದು. ಆದರೂ ಇದರ ಮುಖ್ಯ ವಸ್ತು 'ಬದುಕಿನಲ್ಲಿ ನಾನು ಏನು ಮಾಡಿದೆ' ಎಂಬುದಲ್ಲ. ಬದುಕು ನನ್ನ ಕಣ್ಣಿಗೆ ಹೇಗೆ ಕಂಡಿತು; ನನ್ನೆದುರಿಗೆ ಕಾಲದಿಂದ ಕಾಲಕ್ಕೆ ಪರಿಸ್ಥಿತಿ ಹೇಗೆ ಬದಲಾಯಿಸಿತು; ಸಂಪ್ರದಾಯವೂ ಪಾಶ್ಚಾತ್ಯ ಮಾದರಿಯ ವಿದ್ಯಾಭ್ಯಾಸವೂ ನನ್ನ ಮೇಲೆ ಉಂಟುಮಾಡಿದ ಪರಿಣಾಮವೇನು? ಬಂಧುಗಳು, ಮಿತ್ರರು, ಗುರುಗಳು ನನ್ನ ಮೇಲೆ ಬೀರಿದ ಪ್ರಭಾವ ಇದನ್ನೆಲ್ಲ ಕಾಣಿಸುವುದು ನನ್ನ ಮುಖ್ಯೋದ್ದೇಶ. ಈ ಉದ್ದೇಶಕ್ಕೆ ಚೌಕಟ್ಟಾಗಿ ಆತ್ಮ ಕಥೆ ಬಂದಿದೆ'. ಹಾಗಾಗಿ ಆತ್ಮ ಕಥನಕಾರ ಬದುಕನ್ನು ಹೇಗೆ ಕಾಣುತ್ತಾನೆ, ಹೇಗೆ ಗ್ರಹಿಸುತ್ತಾನೆ ಎಂಬುದು ಇಲ್ಲಿ ಬಹಳ ಮುಖ್ಯವಾದುದು. ಒಂದು ವೇಳೆ ಒಬ್ಬ ಆತ್ಮ ಕಥನಕಾರ ಕೇವಲ ತನ್ನ ಬಗ್ಗೆ ಮಾತ್ರವೇ ಹೇಳಿಕೊಂಡಿದ್ದಾರೆ.

ಹೀಗೆ ಯಾರದೇ ಬದುಕಾಗಿರಲಿ ಅದು ಒಟ್ಟಾರೆ ಸಮಾಜದ ಮುಷ್ಟಿಯಾಗಿರುತ್ತದೆ; ಅದೇ ಸಮಾಜದ ಸೃಷ್ಟಿಯಾಗಿರುತ್ತದೆ. ಕೆಲವು ಆತ್ಮ ಕಥನಕಾರರು ತಾವು ಅನುಭವಿಸಿದ್ದನ್ನು ಹೇಳಿಕೊಳ್ಳುವ ತೀವ್ರತೆಗೆ ಒಳಗಾಗಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಆರ್.ಸಿ.ಹಿರೇಮಠರು ಹೀಗೆ ಹೇಳಿದ್ದಾರೆ. ನನ್ನ ಬದುಕಿನಲ್ಲಿ ಬೆಳದಿಂಗಳಿಗಿಂತ ಬಿಸಿಲೇ ಹೆಚ್ಚು. ಏಕೆ? ಬಿಸಿಲಿನಲ್ಲಿಯೇ ಬೆಳೆದವನು. ಅದನ್ನು ಬದುಕಿಗೆ ಒಗ್ಗಿಸಿಕೊಳ್ಳಲು ಯತ್ನಿಸಿದವನು. ಒಮ್ಮೊಮ್ಮೆ ಬಿಸಿಲು ಸರಿದು ಬೆಳದಿಂಗಳು ಹರಡಿದರೂ ಅದರ ಬಗೆಗೆ ನಾನು ನಿರ್ಲಿಪ್ತನಾಗಿದ್ದವನು. ಇಂಥ ಧೋರಣೆ ಕಾರಣವಾಗಿ ನನ್ನ ಜೀವನ ಚರಿತ್ರೆ ಬರೆಯುವ ಬಗೆಗೆ ನಾನು ನಿರಾಸಕ್ತನಾಗಿದ್ದೆನು. ಆದರೆ ಆತ್ಮೀಯರ ಒತ್ತಾಯ ಮತ್ತು ಅಮೇರಿಕೆಯ ಪರಕೀಯತೆಯನ್ನು ಪರಿಹರಿಸಿಕೊಳ್ಳುವ ಅನಿವಾರ್ಯತೆಗಳು ನನ್ನಿಂದ ಈ 'ಸ್ವಗತ'ವನ್ನು ಬರೆಸಿದವು.

'ಕಳೆದ 75 ವರುಷಗಳಲ್ಲಿ ನಾನು ಪ್ರಪಾತಕ್ಕೂ ಬಿದ್ದಿದ್ದೇನೆ. ಶಿಖರಗಳನ್ನೂ ಹತ್ತಿದ್ದೇನೆ. ಇವೆರಡನ್ನೂ ಸಮಚಿತ್ತದಿಂದ ಸ್ವೀಕರಿಸಿದ್ದೇನೆ. ಈ ಎಲ್ಲ ಅನುಭವಗಳನ್ನು ಬರೆಯಬೇಕೆಂದರೆ 75 ವರುಷಗಳೇ ಬೇಕಾಗಬಹುದು. ಆದುದರಿಂದ ಆತ್ಮ ಚರಿತ್ರೆಯಲ್ಲಿ ಆಯ್ಕೆ ಅನಿವಾರ್ಯ ಹೀಗೆ ಮಾಡುವಾಗ ನನ್ನ ನೆನಪಿನ ಪಾತಾಳ ಗರಡಿಗೂ ನಿಲುಕದೆ, ಕೆಲವು ಘಟನೆಗಳು ಹೊರಗೆ ಉಳೀದುಬಿಟ್ಟವು. 'ಕೊಡದೊಳಗೆಷ್ಟು ನಿಲ್ವುದು ಸಮುದ್ರ ಜಲಂ' ಎಂದು ಸುಮ್ಮನಾಗಿದ್ದೇನೆ'.

ತಮ್ಮ ಜೀವನದಲ್ಲಿ ಅನುಭವಿಸಿದ ಸಿಹಿ-ಕಹಿಗಳನ್ನು ಒಟ್ಟಾಗಿ ಹೇಳಿಕೊಳ್ಳುವ ತವಕವೂ ಆತ್ಮ ಕಥೆಗಳ ಹಿಂದೆ ಕೆಲಸ ಮಾಡಿದೆ. 'ಆಸ್ಪತ್ರೆಗೆ ಸೇರಿದ ಪ್ರಾರಂಭದ ದಿನಗಳಲ್ಲಿ ನಾನು ಅನುಭವಿಸಿದ ಯಾತನೆ, ಅವಮಾನವನ್ನು ನೆನೆಸಿಕೊಂಡರೆ ಈಗಲೂ ಮೈ 'ಜುಂ' ಅನ್ನುವುದು. ಸತತವಾಗಿ ಮೂರು ವರುಷ ಮೈ ಸ್ನಾನ ಕಂಡಿರಲಿಲ್ಲ. ಇದ್ದ ಒಂದೇ ಅಂಗಿ. ಹೊದಿಕೆಯಲ್ಲಿ ಹೇನು, ಕೂರೆಗಳ ಸಾಮ್ರಾಜ್ಯ. ಗಂಟು ಕಟ್ಟಿದ ಉದ್ದ ಉದ್ದ ತಲೆಕೂದಲು. ಹಗಲು ರಾತ್ರಿ ಮೈ ಕಡಿತ. ತಿಂಡಿಗೆ, ಊಟಕ್ಕೆ ಬೇರೆಯವರ ಕೈ ಬಾಯಿ ನೋಡಬೇಕಾದಂತಹ ಪರಿಸ್ಥಿತಿ. ......ಹತ್ತು ವರ್ಷಗಳಲ್ಲಿ ನನ್ನ ಮನದಲ್ಲಿ ಅಚ್ಚಳಿಯದೇ ಉಳಿದ ಹಲವು ಘಟನೆಗಳು ನಡೆದಿವೆ.

ಅವನ್ನೆಲ್ಲಾ ಮರೆಯುವ ಮುನ್ನ ದಾಖಲಿಸುವುದು ನನ್ನ ಸದ್ಯದ ಉದ್ದೇಶವಾಗಿದೆ. ಅಲ್ಲದೆ ಈ ಎಲ್ಲಾ ಸಂದರ್ಭಗಳು ನನ್ನ ಹೃದಯಕ್ಕೆ ತಾಗಿದ ಗೊಂದಲ, ನೋವು, ಕಸಿವಿಸಿಯನ್ನುಂಟು ಮಾಡಿದ ನೈಜ ಘಟನೆಗಳು. ..... ನನಗೆ ಕಾಣದ, ಕಂಡರೂ ಹೇಳಲು ಯೋಗ್ಯವಲ್ಲದಂತಹ ವಿಷಯಗಳು ಬಹಳಷ್ಟು ಇರಬಹುದು. ಆದರೆ ಇಲ್ಲಿ ನನಗೆ ನಾನೇ ಒಂದು ಚೌಕಟ್ಟು ಹಾಕಿಕೊಂಡು ಬರೆದಿದ್ದೇನೆ. ಪ್ರಾಮಾಣಿಕ ಅನಿಸಿಕೆಯ ಜೊತೆಗೆ, ವ್ಯಕ್ತಿ ದೌರ್ಬಲ್ಯಗಳನ್ನು ಅನುಕಂಪದಿಂದ ದಾಖಲಿಸಿದ್ದೇನೆ'.

ಆತ್ಮ ಚರಿತ್ರೆ ಬರೆದುಕೊಳ್ಳುವುದರ ಮೂಲಕ ತಮ್ಮನ್ನು ಬರವಣಿಗೆಯ ಜಗತ್ತಿನಲ್ಲಿ ದಾಖಲಿಸಿಕೊಳ್ಳಬೇಕೆಂಬ ಹಂಬಲವೂ ಇದೆ. ಆದರೆ ಇಂಥ ಹಂಬಲಕ್ಕೆ ವಿರುದ್ಧವಾಗಿ ಹೇಳಿರುವ ಹೇಳಿಕೆಗಳಲ್ಲೇ ಆ ಅಪೇಕ್ಷೆ ಅಡಗಿರುವುದನ್ನು ಕಾಣಬಹುದು. 'ಅಶಾಶ್ವತ ಮಾನವ ಜಗತ್ತಿನಲ್ಲಿ ಮಾನವರಾದವರು ತಮ್ಮ ಹೆಸರನ್ನು ಶಾಶ್ವತಗೊಳಿಸಬೇಕೆಂದು ವಿವಿಧ ರೀತಿಯಲ್ಲಿ ಪ್ರಯತ್ನ ಮಾಡುತ್ತಾರೆ. ಜಗತ್ತಿನ ಅಥವಾ ರಾಷ್ಟ್ರಗಳ ಇತಿಹಾಸವನ್ನು ಬದಲಾಯಿಸಲು ಕಾರಣಕರ್ತರಗಿದ್ದ ವ್ಯಕ್ತಿಗಳ ಹಸರುಗಳೇ ಕಾರ್ಯದಲ್ಲಿ ತೊಡಗಿದರೆ ಅದು ಮೂರ್ಖತನವೆನಿಸುತ್ತದೆ'. ಇದೇ ಮಾದರಿಯ ಶ್ರೀರಂಗರ ಅನಿಸಿಕೆಗಳನ್ನು ಗಮನಿಸಬೇಕು. ನನ್ನ ಬಗ್ಗೆ ಎಲ್ಲ ವಿವರಗಳನ್ನು ಹೇಳುವ ಇಚ್ಛೆ ನನಗಿಲ್ಲ. ಮನುಷ್ಯ ಹುಟ್ಟುವುದು. ಹುಟ್ಟಿದ ಮೇಲೆ ಬೆಳೆಯುವುದು, ಮದುವೆಯಾಗುವುದು, ಮಕ್ಕಳನ್ನು ಹಡೆಯುವುದು ಈ ಕತೆ ಯಾವ ಒಬ್ಬ ವ್ಯಕ್ತಿಯ ವಿಶಿಷ್ಟ ಕಥೆಯಲ್ಲ. ನಾನು ಬರೆಯದಿದ್ದರೂ ಆ ಕಥೆ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರಬೇಕಾದ ಕತೆಯೆ, ನಾನೊಬ್ಬ ಶ್ರೇಷ್ಠ ರಾದವರು ನೂರಾರು ಜನ ಆಗಿ ಹೋಗಿದ್ದಾರೆ. ಇಂದೂ ನೂರಾರು ಜನ ಇರಬಹುದಾಗಿದೆ. ಮುಂದೆ ಸಾವಿರಾರು ಜನ ಬರಬಹುದಾಗಿದೆ'.

ಜಗತ್ತಿನಲ್ಲಿ ನೂರಾರು ಜನರು, ನೂರಾರು ಸಾಧನೆ ಮಾಡಿರುವವರು ಇರುವುದು ನಿಜ. ಆಯಾ ಕಾಲದಲ್ಲಿ ಆಳುವ ವರ್ಗದ ಜನರು, ತಮಗೆ ಬೇಕಾದಂತಹ ವ್ಯಕ್ತಿ ಸಾಧನೆಗಳನ್ನು ಮತ್ತೆ ಮತ್ತೆ ಪರಿಚಯಿಸುತ್ತಿರುತ್ತಾರೆ. ಏಕಕಾಲಕ್ಕೆ ತಮಗೆ ಬೇಡವಾದ ವ್ಯಕ್ತಿಗಳನ್ನು ಅವರ ಪ್ರಯತ್ನ ಸಾಧನೆಗಳನ್ನು ಉದ್ದೇಶಪೂರ್ವಕವಾಗಿ ಮುಚ್ಚಿಹಾಕುತ್ತಿರುತ್ತಾರೆ. ಇವರ ಹಿತಾಸಕ್ತಿಗೆ ಪೂರಕವಾದ ವ್ಯಕ್ತಿಗಳ ವಿವರಗಳನ್ನು ಸಮಾಜದಲ್ಲಿ ಉಳಿಸಿಕೊಳ್ಳುವ ಈ ವರ್ಗ ಸದಾ

ಜಾಗೃತವಾಗಿದ್ದು ಪ್ರಯತ್ನಿಸುತ್ತಿರುತ್ತದೆ. ಕೆಲವು ವ್ಯಕ್ತಿಗಳನು ಮರೆಸುವ ಸಲುವಾಗಿ ಮತ್ತೆ ಕೆಲವರನ್ನು ವೈಭವೀಕರಿಸುತ್ತಿರುತ್ತದೆ. ಹಾಗಾಗಿ ಇಂಥ ಸಂದರ್ಭದಲ್ಲಿ ವ್ಯಕ್ತಿಯ ವಿವರಗಳು ಸಾಮುದಾಯಿಕ ಆಶೋತ್ತರಗಳೊಂದಿಗೆ, ಸೈದ್ಧಾಂತಿಕ ಶ್ರೀಮಂತಿಕೆಯಿಂದ ದಾಖಲಾಗುವ ಅಗತ್ಯವಿದೆ.

ಆತ್ಮ ಕಥೆಗಳ ಉಪಯುಕ್ತತೆಯನ್ನು ಕುರಿತು ಎರಡು ಬಗೆಯ ಅಭಿಪ್ರಾಯಗಳು ಮಂಡಿತವಾಗಿವೆ. ಇವುಗಳ ಉಪಯುಕ್ತತೆಯನ್ನು ಇಲ್ಲವೆ ನಿರುಪಯುಕ್ತತೆಯನ್ನು ನಿರೂಪಿಸಿರುವ ಕ್ರಮಗಳೂ ಕೂಡ ಆಳದಲ್ಲಿ ಆತ್ಮ ಕಥೆಗಳ ಹಿಂದಿರುವ ಸೂಕ್ಷ್ಮ ಅಪೇಕ್ಷೆಗಳೇ ಆಗಿವೆ. ಅಂತಹ ಎರಡು ಬಗೆಯ ಅಪೇಕ್ಷೆಗಳನ್ನು ಇಲ್ಲಿ ಉಲ್ಲೇಖಿಸಬಹುದು. ಕಡಿದಾಳ ಮಂಜಪ್ಪನವರು ಆತ್ಮ ಕಥೆಯ ಉಪಯುಕ್ತತೆಯನ್ನು ಕುರಿತು ಹೀಗೆ ಬರೆದಿದ್ದಾರೆ. 'ನಾನು ಜೀವನದಲ್ಲಿ ಹಲವು ವಿಧವಾದ ಕಷ್ಟಕಾರ್ಪಣ್ಯಗಳನ್ನು ಅನುಭವಿದ್ದವನು. ಅನೇಕ ಎಡರು-ತೊಡರುಗಳನ್ನು ಅನುಭವಿದ್ದವನು. ನಾನು ಅಂದು ಕಷ್ಟಪಟ್ಟಂತೆಯೇ ತಮ್ಮ ಜೀವನದಲ್ಲಿ ಇಂದು ಕಷ್ಟಪಡುತ್ತಿರುವ ಜನರಿಗೆ ನನ್ನ ಅನುಭವದಿಂದ ಅಲ್ಪಸ್ವಲ್ಪವಾದರೂ ಪ್ರಯೋಜನವಾಗಬಹುದೆಂಬ ಆಶೆಯಿಂದಲೂ, ಕೆಲವರು ಮಿತ್ರರ ಒತ್ತಾಯದಿಂದಲೂ ನನ್ನ ಬಾಳಿನಲ್ಲಿ ಸಂಭವಿಸಿದ ಪ್ರಮುಖ ಘಟನೆಗಳನ್ನೊಳಗೊಂಡ ನನ್ನ ಸಂಕ್ಷಿಪ್ತ 'ಆತ್ಮ ಕಥೆಯನ್ನು ಬರೆದಿದ್ದೇನೆ.' ಆದರೆ ಶ್ರೀರಂಗರದು ಇದಕ್ಕೆ ವಿರುದ್ಧವಾದ ನಿಲುವು. ಈ ಕುರಿತು ಶ್ರೀರಂಗರು ಹೀಗೆ ಬರೆದಿದ್ದಾರೆ. 'ನನ್ನ ಜೀವನಾನುಭವಗಳು ಮುಂದೆ ಜನರಿಗೆ ಮಾರ್ಗದರ್ಶಕ ವಾಗಬಲ್ಲವು ಎಂಬ ಹೆಮ್ಮೆಯಿಂದ ನಾನಿದನ್ನು ಬರೆಯುತ್ತಿಲ್ಲ. ಯಾರ ಅನುಭವವು ಜಗತ್ತಿನ ಇತಿಹಾಸದಲ್ಲಿ ಯಾವ ಇನ್ನೊಬ್ಬನಿಗೂ ಮಾರ್ಗದರ್ಶಕವಾಗಲಾರವು ಎಂಬುದನ್ನು ನಾನು ಚನ್ನಾಗಿ ಬಲ್ಲೆ'.

ಶ್ರೀರಂಗರು ಹೇಳುವ ಹಾಗೆ ಒಬ್ಬರ ಅನುಭವಗಳು ಮತ್ತೊಬ್ಬರಿಗೆ ಯಥಾವತ್ತಾಗಿ ಮಾರ್ಗದರ್ಶಕವಾಗಲಾರವು. ಮಾರ್ಗದರ್ಶಕವಾಗುತ್ತದೆ ಎಂದು ಸರಳೀಕರಿಸಿ ನಂಬುವುದು ಒಂದು ಹುಸಿ ಭ್ರಮೆಯಾಗುತ್ತದೆ. ಆದರೆ ಇದರ ಜೊತೆಗೇ ಗಮನಿಸಬೇಕಾದ ಅಂಶವೊಂದಿದೆ. ಅದೇನೆಂದರೆ, ಒಂದು ಕಾಲದ ಸಾಮುದಾಯಿಕ ಬದುಕಿನ ಒಳ ಒತ್ತಡಗಳು ಮುಂದಿನ

ಬದುಕನ್ನು ರೂಪಿಸುತ್ತಿರುತ್ತವೆ. ಅಂದರೆ ಬದುಕಿಗೆ ಒಂದು ನಿರಂತರವಾದ ಚಲನಶೀಲತೆಯಿರುತ್ತವೆ. ಪ್ರಕ್ರಿಯಾತ್ಮಕವಾದ ಬೆಳವಣಿಗೆಯಿರುತ್ತದೆ. ಹಾಗಾಗಿ ಒಬ್ಬರ ಬದುಕು ಮತ್ತೊಬ್ಬರಿಗೆ ಮಾರ್ಗದರ್ಶಕವಾಗುತ್ತದೆ – ಮಾರ್ಗದರ್ಶಕವಾಗುವುದಿಲ್ಲ ಎಂದು ಯಾಂತ್ರಿಕವಾಗಿ ಸರಳೀಕರಿಸುವ ಬದಲು, ಒಟ್ಟಾರೆ ಬದುಕಿನ ಪ್ರಕ್ರಿಯಾತ್ಮಕ ಬೆಳವಣಿಗೆಯಲ್ಲಿ, ಕೆಲವು ವರ್ಗದವರ ಬದುಕು – ಮತ್ತೆ ಕೆಲವು ವರ್ಗದವರ ಬದುಕನ್ನು ವಿರೋಧಿಸುತ್ತಾ, ಏಕಕಾಲಕ್ಕೆ ಅವಲಂಬಿಸುತ್ತಾ ಸಾಗುತ್ತಿರುತ್ತವೆ. ಈ ಪರಸ್ಪರ ವಿರೋಧ ಮತ್ತು ಅವಲಂಬನೆಯೇ ಒಟ್ಟು ಸಾಮಾಜಿಕ ಬೆಳವಣಿಗೆಯ ಒಳತಿರುಳಾಗಿದೆ.

ಇನ್ನು ಕೆಲವು ಆತ್ಮ ಚರಿತ್ರೆಕಾರರಿಗೆ, ಆತ್ಮ ಚರಿತ್ರೆ ಬರೆಯುವುದರ ಮೂಲಕ ತಮ್ಮ ಬದುಕನ್ನೇ ವಿಮರ್ಶಿಸಿಕೊಳ್ಳುವ ಅಪೇಕ್ಷೆಗಳೂ ಇವೆ. ಅಂದರೆ ಒಂದು ಹಂತದ ಬದುಕಿಗೂ ಮತ್ತೊಂದು ಹಂತದ ಬದುಕಿಗೂ ಅಗಾಧವಾದ ವ್ಯತ್ಯಾಸವಿರುತ್ತದೆ; ಅಂತರವಿರುತ್ತದೆ. ಈ ವ್ಯತ್ಯಾಸ ಮತ್ತು ಅಂತರಗಳ ಪರಿಶೀಲನೆಯೂ ಕೂಡ ಆತ್ಮ ಕಥೆಗಳ ಹಿಂದಿನ ಒಂದು ಒತ್ತಾಸೆಯಾಗಿದೆ. ‘ನನ್ನ ಸ್ವಂತದ ಜೀವನದಲ್ಲಿಯ ಸಂನಿವೇಶ ವ್ಯತ್ಯಾಸವು ನನ್ನನ್ನು ಸದಾ ಕುತೂಹಲಿಯನ್ನಾಗಿ ಮಾಡಿದೆ. ಅದನ್ನು ತಿಳಿದುಕೊಳ್ಳುವುದಕ್ಕಾಗಿಯೆ ಈ ಆತ್ಮ ಕಥೆಯನ್ನು ಬರೆದಿದ್ದೇನೆ’. ಎಂಬುದಾಗಿ ಶ್ರೀರಂಗರು ತಮ್ಮ ಆತ್ಮ ಕಥೆಯಾದ ‘ಸಾಹಿತಿಯ ಆತ್ಮ ಜಿಜ್ಞಾಸೆ’ಯಲ್ಲಿ ಹೇಳಿಕೊಂಡಿದ್ದಾರೆ. ಈ ಕುರಿತು ಪಿ.ಲಂಕೇಶ್ ಅವರು ತಮ್ಮ ಆತ್ಮ ಕಥನವದ ‘ಹುಳಿಮಾವಿನ ಮರ’ದಲ್ಲಿ ಹೀಗೆ ಹೇಳಿಕೊಂಡಿದ್ದಾರೆ. ‘ಬದುಕು ಒಂದು ದೃಷ್ಟಿಯಲ್ಲಿ ಕಾರಣವಿರುವ, ಕಾರಣವಿರಲಾರದ ಅಳುಕು, ಪಾಪಪ್ರಜ್ಞೆಯ ಸರಮಾಲೆ.

ಸಮಾಜದ ರಾಜಕೀಯ ಆರ್ಥಿಕ ಪ್ರಕ್ರಿಯೆಗಳ ಪರಿಣಾಮಗಳು ಕೂಡ ಅತ್ಮ ಕಥೆ ಬರವಣಿಗೆಯ ಹಿಂದೆ ಒತ್ತಾಸೆಯಾಗಿ ಕೆಲಸ ಮಾಡಿವೆ. ಹಲವಾರು ಬೇರೆ ಕೃತಿಗಳನ್ನು ಪ್ರಕಟಿಸಿದ ಲೇಖಕರು ಅವುಗಳಲ್ಲಿ ತಾವು ಹೇಳಬೇಕಾದುದನ್ನು ಹೇಳಿರುತ್ತಾರೆ. ಆದರೆ ಅದು ಸಾಲದೆಂಬಂತೆ, ಅಥವಾ ಆತ್ಮ ಕಥೆಗಳ ಮೂಲಕ ಮತ್ತಾವುದೋ ಹೇಳಬೇಕಾದುದು ಇದೆ ಎಂಬಂತೆ ಆತ್ಮ ಕಥೆಯನ್ನು ಬರೆದಿರುತ್ತಾರೆ. ಆದ್ದರಿಂದ ಆತ್ಮ ಕಥೆಗಳ ಹಿಂದೆ ಲೇಖಕರ ಮಹತ್ವವಾದ ಆಶಯವೊಂದು ಇದ್ದೇ ಇರುತ್ತದೆ.

ಆತ್ಮ ಕಥೆಗಳಲ್ಲಿ ಕೇವಲ ಆತ್ಮ ಕಥನಕಾರನ ಜೀವನ ವಿವರಗಳು ಮಾತ್ರ ಇರುವುದಿಲ್ಲ. ಒಂದು ವೇಳೆ ಕೇವಲ ಜೀವನ ವಿವರಗಳೇ ಆತ್ಮ ಕಥನಗಳು ಎನ್ನುವುದಾದರೆ ಅದಕ್ಕೆ ಕೇವಲ ಹತ್ತಾರು ಪುಟಗಳು ಮಾತ್ರವೇ ಸಾಕಾದೀತು. ಆದರೆ ಬಹುತೇಕ ಆತ್ಮ ಕಥನಗಳು ನೂರಾರು ಪುಟಗಳನ್ನು ಒಳಗೊಂಡಿರುತ್ತವೆ. ಅದರಲ್ಲಿ ಜೀವನ ವಿವರಗಳೂ ಇರುತ್ತವೆ. ಜೊತೆಗೆ ತನ್ನ ಪರಿಸರದ ಇನ್ನಿತರೆ ವಿಚಾರಗಳೂ ಇರುತ್ತವೆ. ಪ್ರಾಯಶಃ ಯಾವ ಸಂಗತಿಗಳನ್ನು ತನ್ನ ಇತರೆ ಸಾಹಿತ್ಯ ಕೃತಿಗಳ ಮೂಲಕ ಪ್ರಕಟಿಸಲು ಅಗಿರುವುದಿಲ್ಲವೋ, ಅಂತವುಗಳನ್ನು ಪ್ರಕಟಿಸಲು ಆತ್ಮಕಥನಗಳು ಹುಟ್ಟಿಕೊಳ್ಳುತ್ತವೆ.

ವಸಾಹತುಶಾಹಿ ಉಂಟುಮಾಡಿದ ಮುಖ್ಯ ಪರಿಣಾಮಗಳಲ್ಲಿ ಅದು ಮಂಡಿಸಿದ ವಿಭಾಗೀಕರಣವೂ ಒಂದು. ಕೆಲವು ನಿರ್ದಿಷ್ಟ ಸೌಲಭ್ಯಾಕಾಂಕ್ಷೆ ಅದರ ಹಿಂದೆ ಒತ್ತಾಸೆಯಾಗಿ ನಿಂತಿರಲೂಬಹುದು. ಆ ಚರ್ಚೆ ಬೇರೆ. ವಸಾಹತು ಶಿಕ್ಷಣವು ಜ್ಞಾನಶಾಖೆಗಳನ್ನ ವಿಭಜಿಸಿತು. ಅದು ಮುಂದುವರಿದು ಸಾಹಿತ್ಯದಲ್ಲಿಯೂ ಬೇರೆ ಬೇರೆ ಪ್ರಕಾರಗಳು ಹುಟ್ಟಿಕೊಂಡವು. ಸಾಮುದಾಯಿಕವಾದ ಬದುಕಿನಲ್ಲಿ ಸಮಗ್ರತೆಯು ಒಡೆದು ವ್ಯಕ್ತಿವಾದವೊಂದು ಸೃಷ್ಟಿಯಾಯಿತು. ವ್ಯಕ್ತಿಯು ಸಮುದಾಯ, ಸಮಾಜಕ್ಕಿಂತ ತಾನು ಭಿನ್ನ, ವಿಶಿಷ್ಟ ಎಂಬ ಭಾವನೆಯನ್ನು ಬೆಳೆಸಿತು. ಇದು ಎಲ್ಲಾ ವ್ಯಕ್ತಿಗಳಲ್ಲಿಯೂ ಒಂದೇ ಕಾಲಕ್ಕೆ, ಒಂದೇ ರೀತಿಯಲ್ಲಿ ಮೂಡಲಿಲ್ಲ (ಬಹುತೇಕ ಶಿಕ್ಷಣ ಪಡೆದು ಮತ್ತು ನೌಕರಿಯಲ್ಲಿರುವ ಇಲ್ಲವೆ ಸಮಾಜವು 'ವಿಶಿಷ್ಟ ವ್ಯಕ್ತಿ' ಎಂದು ಗುರುತಿಸಿರುವಂತವರು ಮಾತ್ರವೇ ಆತ್ಮ ಕಥನಗಳನ್ನು ಬರೆದಿದ್ದಾರೆ). ರಾಜಕೀಯಾರ್ಥಿಕ ಹಾಗೂ ಸಾಮಾಜಿಕ ಪಲ್ಲಟಗಳು ಸಮಷ್ಟಿಯೊಳಗೇ ವ್ಯಕ್ತಿಮೌಲ್ಯವನ್ನು ಹುಟ್ಟುಹಾಕಿ ಬೆಳೆಸಿದವು. ತಾನು ಇತರಗಿಂತ ಭೀನ್ನ, ತಾನು ಇತರಗಿಂತ ವಿಶಿಷ್ಟ ಎಂಬ ಈ ನಿಲುವೇ ಅತ್ಮ ಕಥೆಗಳ ಹಿಂದೆ ಕೆಲಸ ಮಾಡಿದೆ. ಇತರರಿಗಿಂತ ಭಿನ್ನ ಎಂಬ ಈ ಭಿನ್ನತೆಯ ನೆಲೆಯು ಬೇರೆ ಬೇರೆ ಅಂಶಗಳಿಂದ ಕೂಡಿರುತ್ತದೆ. ಮುಖ್ಯವಾಗಿ ಗುರುತಿಸುವುದಾದರೆ, ಹಸಿವು, ಬಡತನ, ಜಾತಿಯತೆ, ಅಸ್ಪೃಶ್ಯತೆ, ಬದುಕಿನ ಭಾರೀ ಬಿಕ್ಕಟ್ಟುಗಳು, ಇವುಗಳನ್ನು ಎದುರಿಸಿಯೂ ತಾನು ಹೇಗೆ ಬೆಳೆದದ್ದು, ಬದುಕನ್ನು ಸವಾಲೆಂಬಂತೆ ಸ್ವೀಕರಿಸಿದ್ದು, ತಾನು ಹಿಂದೆ ಇದ್ದ ಪರಿಸ್ಥಿತಿಗಿಂತ ಭಿನ್ನವಾದ ಇಲ್ಲವೆ ಉತ್ತಮವೆಂಬ ಹಂತಕ್ಕೆ ಏರಿದ್ದು ಈ ಅಂಶಗಳು ಪ್ರಧಾನವಾಗಿ ಬೆನ್ನೆಲುಬಾಗಿವೆ. ತಾವು ಇತರಗಿಂತ ಭಿನ್ನ ಎಂಬುದಕ್ಕೆ ಆತ್ಮ ಕಥೆಗಳಲ್ಲಿ ಮತ್ತೊಂದು

ಆಯಾಮ ಕೂಡಾ ಇದೆ. ಅದೇನೆಂದರೆ ಆತ್ಮ ಕಥನಕಾರರು ಬಾಲ್ಯಾವಸ್ಥೆಯಲ್ಲಿದ್ದ ಪರಿಸ್ಥಿತಿಗೂ ಆತ್ಮ ಕಥೆಯನ್ನು ಬರೆಯುವ ಹಂತವನ್ನು ತಲುಪಿರುವ ಸ್ಥಿತಿಗೂ ಇರುವ ಭಿನ್ನತೆ. ಈ ವಿನ್ಯಾಸವನನು ಈ ಮುಂದಿನ ನೆಲೆಗಳಲ್ಲಿ ಗುರುತಿಸಬಹುದು. 1.ಗ್ರಾಮಗಳಿಂದ–ಪಟ್ಟಣ, 2.ಅತ್ಯಂತ ಬಡತನದಿಂದ–ಬಡತನವಿಲ್ಲದ ಸ್ಥಿತಿ, 3.ಅಸ್ಪೃಶ್ಯತೆಯ ಹಂತದಿಂದ–ಅಸ್ಪೃಶ್ಯತೆ ಇಲ್ಲದ ಹಂತ, 4. ಅನಕ್ಷರಸ್ಥ ಪರಿಸರದಿಂದ–ಅಕ್ಷರಸ್ಥ ಪರಿಸರ.

ಯಾವುದೇ ಆತ್ಮ ಕಥೆಗಳಲ್ಲಿ ಪ್ರಧಾನವಾಗಿ ಮೇಲಿನ 4 ಬಗೆಯ ಭಿನ್ನತೆಗಳು ಎದ್ದು ಕಾಣುತ್ತವೆ. ಪ್ರಾದೇಶಿಕ ಭಿನ್ನತೆ ಅಥವಾ ಸಾಂಸ್ಕೃತಿಕ ಭಿನ್ನತೆಗಳ ದೃಷ್ಟಿಯಲ್ಲಿ ಎಲ್ಲಾ ಬಗೆಯ ಪ್ರವಾಸ ಕಥನಗಳೂ ಅತ್ಮ ಕಥನಗಳೇ ಆಗಿರುತ್ತವೆ. ಈ ಮೊದಲೇ ಗುರತಿಸಿರುವಂತೆ ನಾಲ್ಕು ಮುಖ್ಯ ಭಿನ್ನತೆಗಳಲ್ಲಿ ಅತ್ಮ ಕಥೆಗಳು ಚಲಿಸುವುದರಿಂದ ಅವನ್ನು ಪ್ರವಾಸ ಕಥನಗಳೆಂದು ಕರೆಯಬಹುದೆ? ಈ ಬಗ್ಗೆ ಇನ್ನೂ ಆಲೋಚಿಸಬೇಕಾಗಿದೆ.

ಆತ್ಮ ಕಥನಕಾರರು ತಾವು ಮೊದಲು ಇದ್ದ ಸ್ಥಿತಿ/ಪರಿಸ್ಥಿತಿ ಮತ್ತು ಆತ್ಮ ಕಥೆಯನ್ನು ಬರೆಯುವಾಗಿನ ಸ್ಥಿತಿ/ಪರಿಸ್ಥಿತಿ ಇವುಗಳ ನಡುವೆ ಒಂದು ಬಗೆಯ ವ್ಯತ್ಯಾಸವನ್ನು ಮಾಡಿ ಕೊಳ್ಳುತ್ತಾರೆ. ಈ ವ್ಯತ್ಯಾಸಗಳ ಪ್ರಮಾಣಕ್ಕನುಗುಣವಾಗಿ ಆತ್ಮ ಕಥೆಗಳಲ್ಲಿ ಅನುಭವಗಳು ದಟ್ಟೈಸುತ್ತಾ ಪ್ರಕಟವಾಗುತ್ತವೆ. ಇದನ್ನೇ ಬೇರೊಂದು ಮಾತಿನಲ್ಲಿ 'ಬೆಳವಣಿಗೆ' ಎಂದು ಕರೆಯಬಹುದು. ಆದರೆ ಈ ಮೇಲೆ ಗುರುತಿಸಳಾಗಿರುವ ಭಿನ್ನತೆ/ವ್ಯತ್ಯಾಸ ಮತ್ತು ಬೆಳವಣಿಗೆಗಳ ಸ್ವರೂಪ ಬೇರೆ ಬೇರೆ. ಯಾಕೆಂದರೆ ಆತ್ಮ ಕಥನಕಾರರು ತನ್ನ ಬದುಕಿನ ಕೆಲವು ಘಟನೆಗಳನ್ನು ಮಹತ್ವದ ತಿರುವುಗಳೆಂದು ಪರಿಗಣಿಸುತ್ತಾ ಬರುತ್ತಾನೆ. ಬೆಳವಣಿಗೆಯ ಸ್ವರೂಪದಲ್ಲಿಯೂ ತಿರುವುಗಳಿರುತ್ತವೆಯಾದರೂ ಆತ್ಮ ಕಥೆಗಳಲ್ಲಿ ಇದು ಬೇರೊಂದು ರೀತಿಯಲ್ಲಿ ದಾಖಲಾಗುತ್ತದೆ. ಈ ಹಿನ್ನಲೆಯಲ್ಲಿ ಗಮನಿಸಿದಾಗ ಆತ್ಮ ಕಥನಕಾರರು ತಾವು ಹಿಂದಿದ್ದ ಪರಿಸ್ಥಿತಿ ಮತ್ತು ಆತ್ಮ ಕಥೆಯನ್ನು ಬರೆಯುವಾಗಿನ ಪರಿಸ್ಥಿತಿಗಳ ನಡುವೆ ಒಂದು ಬಗೆಯ ಪರಕೀಯತೆಯನ್ನು ಕಂಡುಕೊಳ್ಳುತ್ತಾರೆ.

ಹಿಂದಿದ್ದ ಪರಿಸ್ಥಿತಿ ಮತ್ತು ಈಗಿರುವ ಸ್ಥಿತಿ (ಬರೆಯುವಾಗ)ಗಳ ನಡುವೆ ಭಿನ್ನತೆ/ ವ್ಯತ್ಯಾಸವನ್ನು ಕಂಡುಕೊಂಡಿರುವುದರಿಂದಲೇ ಒಂದರ ನೆಲೆಯಲ್ಲಿ ನಿಂತು ಮತ್ತೊಂದನ್ನು ದಟ್ಟವಾಗಿ ಚಿತ್ರಿಸುವ ಮಾದರಿ ಸಾಮಾನ್ಯವಾಗಿ ಕಾಣುತ್ತದೆ. ಓದುಗರನ್ನು ದಂಗು ಬಡಿಸುವಂತಹ ಅನುಭವಗಳನ್ನು ಪ್ರಕಟಿಸಿರುವ ಎಂ.ಷಡಕ್ಷರಿಯವರೂ ಕೂಡಾ ತಾವು ಆಸ್ಪತ್ರೆಯಲ್ಲಿದ್ದ ಪರಿಸ್ಥಿತಿ ಮತ್ತು ಸಮಾರಂಭವೊಂದಕ್ಕೆ ಹೋದಾಗಿನ ಸ್ಥಿತಿಗಳ ನಡುವೆ ಅಗಾಧವಾದ ಭಿನ್ನತೆಯನ್ನು ಪ್ರಕಟಿಸುತ್ತಾರೆ. ಕುವೆಂಪು ಅವರ ನೆನಪಿನ ದೋಣಿಯಂತೂ ಮೈಸೂರು ಮತ್ತು ಕುಪ್ಪಳಿಗಳ ನಡುವೆ ಎರಡು ದಡಗಳೆಂಬಂತೆ ಓಡಾಡುತ್ತದೆ.

ಸಮುದಾಯಗಳಲ್ಲಿ ಪ್ರತಿಭೆ ಎಂಬುದು, ಬುದ್ಧಿವಂತಿಕೆ ಎಂಬುದು ಕೇವಲ ವ್ಯಕ್ತಿಕೇಂದ್ರಿತವಾಗಿರುವುದಿಲ್ಲ. ಅದು ಸಮುದಾಯ ಕೇಂದ್ರಿತವಾಗಿರುತ್ತದೆ. ಔಪಚಾರಿಕ ಶಿಕ್ಷಣ ಕ್ರಮದಲ್ಲಿ ಬುದ್ಧಿವಂತಿಕೆಯನ್ನು ಯಾಂತ್ರಿಕವಾದ ಅಂಕಗಳ ಮೂಲಕ ಅಳೆಯಲಾಗುತ್ತದೆ. ಅಲ್ಲೆಲ್ಲಾ ಸಾಮಾಜಿಕ ಶ್ರೇಣೀಕರಣದ ನಾನಾ ವಿನ್ಯಾಸಗಳು ಅತ್ಯಂತ ನಿಗೂಢವಾಗಿ ಕೆಲಸ ಮಾಡುತ್ತವೆ. ಇದೂ ಕಾರಣವಾಗಿ ಅನೇಕ ಆತ್ಮಕಥೆಗಳಲ್ಲಿ ಆತ್ಮ ಕಥನಕಾರರು ತನ್ನ ಯಾವುದಾದರೊಂದು ವಿಶಿಷ್ಟ ಪ್ರತಿಭೆಯನ್ನು ಕುರಿತು ತಾದಾತ್ಮ್ಯದಿಂದ ವರ್ಣಿಸಿಕೊಳ್ಳುತ್ತಾರೆ. ಅದಕ್ಕೆ ಬೇರೆಯವರ ಹೊಗಳಿಕೆಯ ವಿನ್ಯಾಸದ ಆಯಾಮವನ್ನೂ ಸೇರಿಸಿ ಬಲಪಡಿಸುತ್ತಾರೆ. ಈ ಸಂಗತಿಯು ಔಪಚಾರಿಕ ಶಿಕ್ಷಣದ ಮೂಲಕ ಬೆಳೆದು ಬಂದಿರುವ ವ್ಯಕ್ತಿ ವಿಶಿಷ್ಟ ಮೌಲ್ಯದ ಸಂಗತಿಯನ್ನು ಸಾದರಪಡಿಸುತ್ತದೆ.

ಹೀಗೆ ಸಮಾಜದ ಒಟ್ಟು ಪ್ರಕ್ರಿಯೆಯ ನಾನಾ ಪರಿಣಾಮಗಳು ಆತ್ಮ ಕಥೆ ಬರವಣಿಗೆಗಳ ಹಿಂದೆ ಒಂದು ನಿರ್ಣಾಯಕ ಒತ್ತಾಸೆಯಾಗಿ ಕೆಲಸ ಮಾಡಿವೆ.

ಹೀಗಾಗಿ ನಾನು "ಜೋಳದರಾಶಿ ದೊಡ್ಡನಗೌಡರು' ನಂದೇ ನಾನೋದಿದೆ ಎಂಬ ಆತ್ಮ ಚರಿತ್ರೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇವರು ರಂಗಭೂಮಿ ಉಳಿಸಲು ಬೆಳಸಲು, ಹಾಗೂ ಕನ್ನಡ ಸಾಹಿತ್ಯವನ್ನು ಬೆಳಿಸಲು ಪಣತೊಟ್ಟವರು, ಹಾಗೂ ಸಮಾಜಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು, ಜೀವನವನ್ನು ತಮಗಾಗಿ ಬದುಕದೆ ಸಾಮಾಜಕ್ಕಾಗಿ

ಬದುಕಿದವರು. ತಮ್ಮ ಇಡೀ ಜೀವನವನ್ನೆ ಬೇರೆ ಅವರಿಗೆ ಮೀಸಲು ಇಟ್ಟವರು. ಕುಟುಂಬದ ಬಗ್ಗೆ ಯೋಚಿಸದೆ, ರಂಗಭೂಮಿ, ಸಾಹಿತ್ಯ ಸಾಮಾಜಸೇವೆ ಎಂದೆ ಜೀವನ ಸಾಗಿಸಿದವರು. ಹಾಗಾಗಿ ಇವರ ಆತ್ಮ ಚರಿತ್ರೆ ಆಯ್ಕೆ ಮಾಡಿಕೊಳ್ಳಲಾಗಿದೆ.

# ಅಧ್ಯಾಯ-3

**ಜೋಳದರಾಶಿ ದೊಡ್ಡನಗೌಡ ಜೀವನ, ಸಾಹಿತ್ಯ, ರಂಗಭೂಮಿ ಸಂಕ್ಷಿತ ನೋಟ**

**3.1 – ಜೀವನ :-**

ಜೋಳದರಾಶಿ ಬಳ್ಳಾರಿ ತಾಲೂಕಿನ ಒಂದು ಸಣ್ಣಹಳ್ಳಿ. ಬಳ್ಳಾರಿಯಿಂದ ಗುಂತಕಲ್ಲು ಅನಂತಪುರಗಳಿಗೆ ಹೋಗುವ ಮಾರ್ಗದಲ್ಲಿರುವ ಜೋಳದರಾಶಿ ಆಂಧ್ರದ ಗಡಿಗೆ ತೀರಾ ಸಮೀಪದಲ್ಲಿದೆ. ಈ ದೇಶದ ಇತರ ಹಳ್ಳಿಗಳಂತೆ ಒಂದು ಮಾಮೂಲಿ ಊರಾಗಿದ್ದ ಜೋಳದರಾಶಿ ಕರ್ನಾಟಕ, ಆಂಧ್ರಗಳಲ್ಲಿ ಜನಪ್ರಿಯವಾದದ್ದು. ಆ ಊರಿನ ಕವಿ ಗಮಕಿ ನಟ ದೊಡ್ಡನಗೌಡರಿಂದ ಕೆಂಗಲ್ಲು ದೊಡ್ಡನಗೌಡರು ಜೋಳದರಾಶಿ ದೊಡ್ಡನಗೌಡರಾಗಿ ಹೆಸರು ಮಾಡುವುದರ ಮೂಲಕ ತಮ್ಮ ಹುಟ್ಟೂರನ್ನು ನಾಡಿನ ಸಾಂಸ್ಕೃತಿಕ ನಕ್ಷೆಯಲ್ಲಿ ಅಜರಾಮಗೊಳಿಸಿದರು. ಹುಟ್ಟಿದ ಹಳ್ಳಿಯಲ್ಲಿ ಅಂದು ಎಷ್ಟು ಲಭ್ಯವಿತ್ತೋ ಅಷ್ಟು ಪರಿಮಿತ ವಿದ್ಯೆಯನ್ನು ಪಡೆದು ತಮ್ಮ ಆಗಾಧ ಪ್ರತಿಭೆ ಸ್ವ-ಸಾಮರ್ಥ್ಯಗಳಿಂದ ಗ್ರಾಮೀಣ ಪ್ರತಿಭಾ ಶ್ರೀಮಂತಿಕೆಗೆ ಉದಾಹರಣೆಯಾಗಿದ್ದಾರೆ. ಹೀಗಾಗಿ ಜೋಳದರಾಶಿ ಎಂಬುದು ಅಚ್ಚದೇ ಪ್ರತಿಭೆಗೆ ಸಾಂಸ್ಕೃತಿಕ ವಿಸ್ತಾರಕ್ಕೆ ಸಂಕೇತವಾಗಿ ಹೆಸರು ಪಡೆದುಕೊಂಡಿತು.

ಜೋಳದರಾಶಿ ದೊಡ್ಡನಗೌಡರ ತಾತನ ಊರು, ಗೌಡರ ತಂದೆ ಹಾವಳಗಿ ಗ್ರಾಮದ ಕೆಂಗಲ್ಲು ಪಂಪನಗೌಡರು, ಜೋಳದರಾಶಿಯ ಸಣ್ಣ ಹೋನ್ನನಗೌಡರಿಗೆ ಪಂಪನಗೌಡರ ಅಕ್ಕ ಭೋಗಮ್ಮನನ್ನು ಕೊಟ್ಟಿತ್ತು. ಆ ಅಕ್ಕನ ಮಗಳು ರುದ್ರಮ್ಮನನ್ನು ಪಂಪನಗೌಡರು ಮದುವೆಯಾಗಿದ್ದರು. ಪಂಪನಗೌಡರದು ಬಡತನದ ಕುಟುಂಬ ತಂದೆ ಮತ್ತು ತಮ್ಮನೊಂದಿಗೆ ಜೋಳದರಾಶಿಗೆ ಮಾವನ ಆಶ್ರಯಕ್ಕೆ ಬಂದರು. ಸಣ್ಣ ಹೋನ್ನನಗೌಡರು ನಾನೂರು ಎಕರೆಯ ಭೂಮಾಲೀಕರು, ಅಷ್ಟೊಂದು ಭೂಮಿಯನ್ನು ನಿರ್ವಹಿಸಲು ಮನೆಯವರೆನಿಸಿಕೊಂಡು ದುಡಿಯುವ ಜನರ ಅವಶ್ಯಕತೆಯೂ ಇತ್ತು. ಪ್ರೀತಿಯ ಒಬ್ಬಳೇ ಮಗಳು ಅಳಿಯ ತಮ್ಮ ಕಣ್ಣೆದುರಿನಲ್ಲಿರುವುದು ಸಣ್ಣ ಹೋನ್ನನಗೌಡರಿಗೆ ಸಂತೋಷದ ವಿಷಯವಾಗಿತ್ತು. ಅವರ ಅಣ್ಣ ದೊಡ್ಡಹೋನ್ನನಗೌಡರು ಮಕ್ಕಳಿಲ್ಲದೇ ತೀರಿಕೊಂಡಿದ್ದರಿಂದ ಅವರ ಪಾಲಿನ ಅರ್ಧ ಆಸ್ತಿಗೆ ಸಣ್ಣ ಹೋನ್ನನಗೌಡರು ಮಾಲೀಕರಾಗಿದ್ದರು. ರುದ್ರಮ್ಮ-ಪಂಪನಗೌಡ ದಂಪತಿಗಳಿಗೆ

ದೊಡ್ಡನಗೌಡ ಮತ್ತು ನೀಲಮ್ಮ ಜನಿಸಿದಾಗ ಆ ದೊಡ್ಡನ ಮನೆಯಲ್ಲಿ ಸಂತಸದ ಬೆಳಕು ಪಸರಿಸಿತು. ದೊಡ್ಡನಗೌಡರ ಜನನ 27-07-1910 ರಂದು ಮೊಮ್ಮಗ ದೊಡ್ಡನಗೌಡನೆ ಈ ದೊಡ್ಡ ಕುಟುಂಬದ ಉತ್ತರಾಧಿಕಾರಿಯೆಂದು ನಿರ್ಧರಿಸಿದ ಸಣ್ಣ ಹೋನ್ನನಗೌಡರು ಮೊಮ್ಮಗನನ್ನು ವಿಶೇಷ ಪ್ರೀತಿ ವಾತ್ಸಲ್ಯಗಳಿಂದ ಬೆಳೆಸಿದರು. ದೊಡ್ಡನಗೌಡರು ಎಳೆ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡಾಗ ತಂದೆ ಪಂಪನಗೌಡರು ಮರು ಮದುವೆಯನ್ನು ನಿರಾಕರಿಸಿದರು, ತಾಯಿಯ ವಾತ್ಸಲ್ಯದಿಂದ ವಂಚಿತರಾದ ದೊಡ್ಡನಗೌಡ ನೀಲಮ್ಮ ಆ ವಾತ್ಸಲ್ಯವನ್ನು ನಾಗಮ್ಮಜ್ಜಿಯಿಮದ ಪಡೆದರು. ದೊಡ್ಡ ಹೊನ್ನನಗೌಡರ ಹೆಂಡತಿ ನಾಗಮ್ಮ ಈ ಮಕ್ಕಳಿಗೆ ತಾಯಿಯ ನೆನಪಾಗದಂತೆ ಅಕ್ಕರತೆಯಿಂದ ಬೆಳೆಸಿದರು. ದೊಡ್ಡನಗೌಡರ ತಾತ ಸಣ್ಣ ಹೊನ್ನನಗೌಡರು ಘನತೆ ಗೌರವಗಳಿಂದ ಬಾಳಿದವರು. ಹೆಚ್ಚು ಓದಿದವರಲ್ಲವಾದರೂ ವ್ಯವಹಾರ ಚತುರರು. ದೊಡ್ಡನಗೌಡರ ಆರಾಧ್ಯದೈವ ಗ್ರಾಮ ದೇವತೆ ರಾಮೇಶನ ಗುಡಿಯನ್ನು ಸಣ್ಣ ಹೊನ್ನನಗೌಡರು ಕಟ್ಟಿಸಿದ್ದಲ್ಲದೆ ಅದರ ನಿರ್ವಹಣೆಗೆ ಇಪ್ಪತ್ತೆರಡು ಎಕರೆ ಭೂಮಿದಾನ ನೀಡಿದವರು. ಗತ್ತು ಬಿಗುಮಾನಗಳೊಂದಿಗೆ ಭಕ್ತಿ ವಿನಯಗಳನ್ನು ಮೈಗೂಡಿಸಿಕೊಂಡವರು. ಅವರು ಉರವಕೊಂಡ ಮಠದ ಚೆನ್ನಬಸವ ಸ್ವಾಮಿಗಳ ಪರಮಭಕ್ತರಾಗಿದ್ದವರು. ಮನೆಯಲ್ಲಿ ಮದುವೆ ನಡೆದಾಗ 'ದೈವದೂಟ' ಅಂದು ಸಾಮಾನ್ಯವಾಗಿತ್ತು. ಪ್ರತಿಯೊಂದು ಕುಲ ಜಾತಿಯವರನ್ನು ವಾದ್ಯಮೇಳದೊಂದಿಗೆ ಹೋಗಿ ಕರೆದು ಆಮಂತ್ರಿಸುವ ಪದ್ಧತಿಯಿತ್ತು, ಒಮ್ಮೆ ಮನೆಯ ಮದುವೆಯ ಸಂದರ್ಭದಲ್ಲಿ ಸಣ್ಣ ಹೊನ್ನನಗೌಡರು ಏನೋ ಪರಪಾಟಾಗಿ ಹಜಾಮರ ಸುಂಕಣ್ಣನನ್ನು ಕರೆಯುವುದನ್ನು ಮರೆತಿದ್ದರು. ಅವನು ಸಿಟ್ಟು ಅಪಮಾನಗಳಿಂದ ಸಿಡಿಮಿಡಿಗೊಂಡಿದ್ದ. ಈ ವಿಷಯ ಸಣ್ಣ ಹೊನ್ನನಗೌಡರಿಗೆ ಗೊತ್ತಾಯಿತು. ಸ್ವತಃ ಸುಂಕಣ್ಣನ ಮನೆಗೆ ಹೋಗಿ 'ಅಪ್ಪಾ ತಪ್ಪಾಯಿತು, ಮನೆಗೆ ಬಂದು ಊಟ ಮಾಡು' ಎಂದು ಕೈಮುಗಿದು ಕೇಳಿಕೊಂಡರು ಇಂಥ ವಿನಯವಂತರಾಗಿದ್ದರು.

ಬಾಲಕ ದೊಡ್ಡನಗೌಡರ ವಿದ್ಯಾಭ್ಯಾಸ ಊರಿನ ಹನುಮಂತ ದೇವರ ಗುಡಿಯಲ್ಲಿ ಆರಂಭವಾಯಿತು, ಅದು ಊರವರೇ ನಡೆಸುತ್ತಿದ್ದ ಖಾಸಗಿ ಶಾಲೆ, ಮೊದಲ ಹಂತದ ಶಿಕ್ಷಕರು ರುದ್ರಯ್ಯನವರು. ಅವರು ಹೆಚ್ಚು ಓದಿದವರಲ್ಲ, ಆದರೆ ಪ್ರಾರಂಭಿಕ ಶಿಕ್ಷಣದ ಬಗ್ಗೆ ತುಂಬಾ ಪರಿಣಿತರು. ಮಕ್ಕಳ ಮನಸ್ಸಿನಲ್ಲಿ ವಿದ್ಯೆ ನಿಲ್ಲುವಂತೆ ಆಕರ್ಷಕವಾಗಿ ಪಾಠ ಹೇಳುತ್ತಿದ್ದರು.

ಹಾಸ್ಯ ಪ್ರವೃತ್ತಿಯವರೂ ಬಯಲಾಟದ ಹಿಮ್ಮೇಳಗಾರಯಕರೂ ಆಗಿದ್ದ ರುದ್ರಯ್ಯನವರು ಅಚ್ಚು ಮೆಚ್ಚಿನ ಶಿಕ್ಷಕರಾಗಿದ್ದುದ್ದು ಸಹಜವೇ, ಆರಂಭದ ಅಕ್ಷರಾಭ್ಯಾಸ ಉಸುಕಿನಲ್ಲಿ ಮಕ್ಕಳು ಉಸುಕಿನಲ್ಲಿ ಅಕ್ಷರಗಳನ್ನು ತೀಡಿ ತೀಡಿ ರೂಢಿ ಮಾಡಿಕೊಳ್ಳುತ್ತಿದ್ದರು. ಹದಿನೈದು ದಿನಕ್ಕೊಮ್ಮೆ ಹುಡುಗರು ಹಳ್ಳದಿಂದ ಹೊಸ ಉಸುಕು ತಂದು ಹಾಕುತ್ತಿದ್ದರು. ಹುಣ್ಣಿಮೆ ಅಮವಾಸ್ಯೆಯಂದು ಶಾಲೆಗೆ ಸೂಟಿ, ಅಂದು ಹುಡುಗರು ಗುಡಿಯನ್ನು ಸಾರಿಸಿ ಓರಣಗೊಳಿಸಿ ಪುಸ್ತಕಗಳನ್ನು ಸಾಲಾಗಿಟ್ಟು, ಪೂಜೆ ಮಾಡುತ್ತಿದ್ದರು, ಹುಡುಗರೇ ತಂದ ಕಡ್ಲೆ ಮಂಡಾಳುಗಳ ನೈವೇದ್ಯ, ನಂತರ ಅದನ್ನು ಪ್ರಸಾದವಾಗ ಹಂಚಲಾಗುತ್ತಿತ್ತು. ಶಾಲೆಯ ಶುಲ್ಕತರಗತಿಗಳನ್ನಾಧರಿಸಿ ಒಬ್ಬ ಹುಡುಗನಿಗೆ ನಾಲ್ಕಾಣೆಯಿಂದ ಒಂದು ರೂಪಾಯಿಯವರೆಗೆ, ಪಾಠದ ಅವಧಿ ಬೆಳಿಗ್ಗೆ ಆದರಿಂದ ಸಂಜೆ ಏಳು ನಡುವೆ ಮುಂಜಾನೆ ಎಂಟು ಗಂಟೆಗೆ ಮಧ್ಯಾಹ್ನ ಎರಡು ಗಂಟಿಗೆ ಊಟಕ್ಕೆ ಬಿಡುತ್ತಿದ್ದರು. ಮಧ್ಯಾಹ್ನ ಊಟವಾದ ಮೇಲೆ ಹುಡುಗರಿಗೆ ಕಾಪಿಬರೆಯಲು ಹೇಳಿ ರುದ್ರಯ್ಯನವರು ಕಂಬಳಿ ಹಾಸಿಕೊಂಡು ಮಲಗುವ ರೂಢಿಯಿತ್ತು.

ಎರಡನೆ ಹಂತದ ಗುರು ಪಡಕ್ಷರಯ್ಯನವರು ದೊಡ್ಡನಗೌಡರ ಪ್ರತಿಭೆ ಅರಳಿ ವಿಕಾಸಗೊಳ್ಳಲು ಬಹಳಷ್ಟು ಕಾರಣರು, ಅವರು ಗಮಕದಲ್ಲಿ ತೆಲುಗು, ಕನ್ನಡ ಕಾವ್ಯಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅದನ್ನೇ ಮಕ್ಕಳಿಗೆ ಶ್ರದ್ದೆಯಿಂದ ಕಲಿಸುತ್ತಿದ್ದರು. ಗೌಡರು ಲೆಕ್ಕದಲ್ಲಿ ಅಷ್ಟಕ್ಕಷ್ಟೇ, ಕಾವ್ಯವಾಚನ ಪ್ರಾರಂಭವದರೆ ಹಿರಿಹಿರಿ ಹಿಗ್ಗುತ್ತಿದ್ದರು. ಆ ತರಗತಿ ಅವರಿಗೆ ಬ್ರಹ್ಮನಂದವನ್ನುಂಟು ಮಾಡುತ್ತಿತ್ತು. ಆದ್ದರಿಂದ ಅವರು ಷಡಕ್ಷರಯ್ಯನವರ ನೆಚ್ಚಿನ ಶಿಷ್ಯರಾದರು. ಮುಂದೆ ಗಮಕ ಕಲಾ ನಿಧಿಯಾಗಿ ಬೆಳಗಿದ ದೊಡ್ಡನಗೌಡರಿಗೆ ಗಮಕದ ಬುನಾದಿ ಹಾಕಿದವರು ಷಡಕ್ಷರಯ್ಯನವರು, ಆಗ ಕಲಿತ ಶಿವಮಹಾದೇವ ಮತ್ತು 'ಪಾಲಿಸೆನ್ನನು ಪದುಳವೆರಸಿ' ಪ್ರಾರ್ಥನೆಗಳು ದೊಡ್ಡನಗೌಡರ ಕಂಠದಲ್ಲಿ ಉಳಿದು ಮುಂದೆ ಅವರಿಗೆ ಅಪಾರ ಕೀರ್ತಿಯನ್ನು ತಂದು ಕೊಟ್ಟವು. ಷಡಕ್ಷರಯ್ಯನವರಂಥ ಗುರುಗಳು ದೊರೆತುದು ಗೌಡರ ಭಾಗ್ಯವೆಂದೇ ಹೇಳಬೇಕು. ಷಡಕ್ಷರಯ್ಯನವರ ಮಕ್ಕಳಿಗೆ ಕಾವ್ಯವಾಚನ ಪಾಠ ಹೇಳುತ್ತಿದ್ದರೆ, ಸಮೀಪದಲ್ಲಿ ಕುಲುಮೆ ಕೆಲಸ ಮಾಡುತ್ತಿದ್ದ ಸಾಬಿಯೊಬ್ಬ ತನ್ನ ಕೆಲಸ ನಿಲ್ಲಿಸಿ 'ವಾಹ್' ಅನ್ನುತ್ತಿದ್ದ ಚಿಕ್ಕಪುಟ್ಟ ವ್ಯಪಾರಕ್ಕೆ ಅದಕ್ಕೆ ಇದಕ್ಕೆ ಜೋಳದರಾಶಿಗೆ ಬಂದ ಪರ ಊರವರು ಮೈಮರೆತು ಷಡಕ್ಷರಯ್ಯನವರ ಕಾವ್ಯವಾಚನ ಆಲಿಸುತ್ತಿದ್ದರು. ವಿದ್ಯಾರ್ಥಿ ದೊಡ್ಡಗೌಡರಿಗೆ

ಓದುವ ಚಟ ಹಚ್ಚಿದವರು ಗುರುಗಳಾದ ಷಡಾಕ್ಷರಯ್ಯನವರೇ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯುವಷ್ಟರಲ್ಲಿ ದೊಡ್ಡನಗೌಡರು ಕತೆ ಕಾದಂಬರಿಗಳನ್ನು ಧರ್ಮಾವರಂ ಕೃಷ್ಣಮಾಚಾರ್ಯ 4 ಕೊಲಾಚಲಂ ಶ್ರೀನಿವಾಸರಾಯರ ತೆಲುಗು ನಾಟಕಗಳನ್ನು ಓದಿದ್ದರು, ಮಂಗಳಾರತಿ ಸ್ತೋತ್ರಗಳನ್ನು ರಚಿಸಿ ಹಾಡುವ ಬಾಲ ಕವಿಯೂ ಆಗಿದ್ದರು, ಗೌಡರು ಪ್ರಾಥಮಿಕ ಶಾಲೆಯಲ್ಲಿ ಕಲಿತದ್ದು ಪ್ರಧಾನವಾಗಿ ತೆಲುಗು ಪೂರಕವಾಗಿ ಕನ್ನಡದ ಕಲಿಕೆ, ಹೀಗಾಗಿ ಅವರು ಎರಡು ಭಾಷೆಗಳಲ್ಲಿ ಪ್ರಭುತ್ವ ಸಾಧಿಸಿಕೊಂಡು ಎರಡೂ ಭಾಷೆಗಳಲ್ಲಿ ಕವನ – ವ್ಯಾಖ್ಯಾನಗಳನ್ನು ಬರೆದರು, ವಿದ್ಯಾರ್ಥಿ ದೊಡ್ಡನಗೌಡರಿಗೆ 10 ವರ್ಷದವರೆಗೆ ತಲೆತುಂಬ ಕೂದಲಿತ್ತು, ಮುಡಿಕಟ್ಟಿಕೊಂಡು ಶಾಲೆಗೆ ಹೋಗುತ್ತಿದ್ದರು, ಶಾಲೆಯಲ್ಲಿ ಮುಡಿಬಿಟ್ಟಿದರೆ ಗುರುಗಳ ಅಪ್ಪಣೆ ಪಡೆದು ನೇರ ಮನೆಗೆ ಬಂದು ನಾಗಮ್ಮಜ್ಜಿಯಿಂದ ಮುಡಿಕಟ್ಟಿಸಿಕೊಂಡು ಹೋಗುತ್ತಿದ್ದರು. ದೊಡ್ಡನಗೌಡರು ಪ್ರಾಥಮಿಕ 4ನೇ ತರಗತಿ ಮುಗಿಸಿದಾಗ ಅವರೆ 14 ವರ್ಷ ಓದಿನಲ್ಲಿ ಜಾಣ, ಇನ್ನೂ ಓದುವ ಹಂಬಲ, ಆದರೂ ಮುಂದೆ ಪರ ಊರಿಗೆ ಹೋಗಿ ಹೆಚ್ಚಿನ ವಿದ್ಯಭ್ಯಾಸ ಪಡೆಯಲಿಲ್ಲ. ಮಕ್ಕಳಿಗೆ ಆಧುನಿಕ ಉನ್ನತ ಶಿಕ್ಷಣ ನೀಡುವ ಖಯಾಲಿ ಆಗಿನ ಹಳ್ಳಿಯ ಜನತೆಗಿರಲಿಲ್ಲ, ಮನೆತನದ ನಿರ್ವಹಣೆಗೆ ಬೇಕಾದಷ್ಟು ಅಕ್ಷರಜ್ಞಾನ ಸಾಕು ಎಂಬ ಅಭಿಪ್ರಾಯವಿತ್ತು, ಅಲ್ಲದೆ ಸಣ್ಣ ಹೊನ್ನನಗೌಡರಿಗೆ ಮುದ್ದಿನ ಮೊಮ್ಮಗನನ್ನು ಏಕಾಂಗಿಯಾಗಿ ಪರ ಊರಿಗೆ ಕಳಿಸುವ ಮನಸ್ಸಿರಲಿಲ್ಲ. ಓದುವ ಹಂಬಲವಿದ್ದರೂ ಸ್ವತಃ ಗೌಡರು ಮುಂದಿನ ವಿದ್ಯಭ್ಯಾಸ ಮುಂದುವರೆಸಲು ಹಠ ಹಿಡಿಯಲಿಲ್ಲ. ಏಕೆಂದರೆ ಅವರಿಗೆ ಇಷ್ಟೊತ್ತಿಗಾಗಲೆ ನಾಟಕದ ಹುಚ್ಚು ತಲೆಗೇರಿತ್ತು, ಶಾಲಾ ಓದಿನ ಬಂಧನಕ್ಕೆ ಸಿಲುಕಿದರೆ ನಾಟಕ ಚಟುವಟಿಕೆಗಳಿಗೆ ಅವಕಾಶ ದೊರೆಯದೆಂಬ ಭೀತಿ ಅವರಿಗಿದ್ದುದ್ದರಿಂದ ತಾತನ ಅಭಿಪ್ರಾಯದಂತೆ ಊರಲ್ಲಿಯೇ ಉಳಿಯುವ ವಿಧೇಯತೆ ತೋರಿಸಿದರು, ಆದರೆ ಅವರ ಅಧ್ಯಯನಕ್ಕೆ ಚ್ಯುತಿ ಬರಲಿಲ್ಲ. ಕ್ರಮಬದ್ಧ ಶಿಕ್ಷಣಕ್ಕೆ ಎರವಾದರೂ ಮನೆಯಲ್ಲಿ ಪಟ್ಟಾಗಿ ಕುಳಿತು ಗಂಭೀರ ಅಧ್ಯಯನ ನಡೆಸಿದರು.

ಅಂದಿನ ಸಂದರ್ಭದ ಬಗ್ಗೆ "ಶಾಲೆ ಬಿಟ್ಟ ತರುವಾಯ ನನ್ನ ಸಾಹಿತ್ಯ ಕವಿತ್ವ–ಗಮಕ–ನಾಟಕಗಳ ವ್ಯಾಸಂಗವು ಒಂದರಲ್ಲೊಂದು ಸೇರಿ ಬಿಗಿಯಾಗಿ ಹುರಿಯೇರಿದ ಹಗ್ಗದಂತೆ ಬಿಡುವಿಲ್ಲದೆ ಒಂದೇ ಸವನೆ ಸಾಗಿದವು"

ಮಮತೆಯ ನಿಧಿ ನಾಗಮ್ಮವ್ವ ಆಗಿದ್ದರು. ತಾಯಿಯನ್ನು 8ನೇ ವರ್ಷದಲ್ಲಿ ಕಳೆದುಕೊಂಡು ತಬ್ಬಲಿಯಾದರು. ದೊಡ್ಡ ತಾತನ ಕುಟುಂಬ ನಾಗಮ್ಮವ್ವ ಬಹು ಅಕ್ಕರೆಯಿಂದ ಜೋಪಾನ ಮಾಡುತ್ತಿದ್ದಳು, ಯಾರಾದರಾಗಲಿ ತನ್ನ ಮೊಮ್ಮಗನನ್ನು ಹೊಡೆದರೆ ಎಂದೂ ಸಹಿಸುತ್ತಿರಲಿಲ್ಲ ಒಮ್ಮೆ ಗೌಡರ ತಾಯಿ ರುದ್ರಮ್ಮ ಯಾಕೋ ಬಹುಸಿಟ್ಟಿನಿಂದ ಬಂದಿದ್ದಳು ಆಕೆಯ ಕಾಲುಂಗುರ ಕಣ್ಣಿಗೆ ತಾಕಿ ಕಣ್ಣು ಬಾತಿತ್ತು, ಅದನ್ನು ಯಾರಿಗೂ ಹೇಳಬಾರದೆಂದು ಪಶ್ಚಾತಾಪಗೊಂಡು ಅಂಗಲಾಚಿ ಕಣ್ಣೀರಿಟ್ಟು ಗಲ್ಲ ಹಿಡಿದು ಬೇಟಿಕೊಂಡಿದ್ದಳು, ನಾನು ಯಾರಿಗೂ ಹೇಳದಿದ್ದರೂ ನನ್ನ ಕಣ್ಣು ಹೇಳದಿರುತ್ತದೆಯೇ? ನೋಡಿದ ಕೂಡಲೇ ನಮ್ಮ (ತಾಯಿಯ ತಾಯಿ) ಅವ್ವ ಭೋಗಮ್ಮ – ನಾಗಮ್ಮ ತಬ್ಬಿಕೊಂಡು ಏನಪ್ಪಾ ಏನಾಯಿತೋ ಮಗು ಎಂದು ತಲೆದಡವಿ ಕೇಳಿದಕೂಡಲೇ ಅಮ್ಮನಿಗೆ ಕೊಟ್ಟ ಮಾತು ಮರೆತು ಅಬ್ಬರಿಸಿ ಅಳುತ್ತಾ "ಅಮ್ಮ" ಎಂದೆ, ಎಲ್ಲರಿಗೂ ಅರ್ಥವಾಯಿತು. ಆಗ ಗೌಡರ ತಾಯಿಯನ್ನು ಕರೆದು ಗದರಿಸಿ ಸಿಟ್ಟು ಮಾಡಿದ್ದು, "ಅನ್ಯಾಯವಾಗಿ ಹುಡುಗನ ಕಣ್ಣುಕಳೆದಿದ್ದೇಯಲ್ಲೆ ಮಾರಾಯಗಿತ್ತೀ ನೀನೆಂಥ ತಾಯಿ" ಎಂದು ಗೌಡ ಅವ್ವನವರು ಚಂಡಿಯಂತೆ ಸಿಟ್ಟಾಗಿದ್ದುದು ನೆನಪಿಗೆ ಬಂದು ಅಯ್ಯೋ ತಾಯಿಗೆ ಕೊಟ್ಟ ಮಾತು ನಡೆಸಲಿಲ್ಲಾ ಎಂದು ಅಂದು ಪೆಟ್ಟಾದ ಕಣ್ಣಿನಿಂದ ನೀರೂರುತ್ತೆ.

ಗೌಡರ ತಾಯಿ ಶ್ರೀಮಂತರ ಮಗಳಾಗಿ ಬಡತನದ ಗಂಡನ ಕೈಹಿಡಿದು ಆ ಬಡತನವನ್ನೆ ಶ್ರೀಮಂತಿಕೆಯಾಗಿ ಉಂಡು ಬಾಳುವೆ ಮಾಡಿದ ಗರತಿ, ಹುಣ್ಣಿವೆಯೆಂದು ತಂದೆಯ ಮನೆಯಲ್ಲಿ ಮಾಡಿದ ವಿಶೇಷ ಪಕ್ವಾನ್ನಗಳಿಗಾಸೆ ಮಾಡದೆ ಕರೆದರೂ ಹೋಗದೆ, ಗಂಡನುಂಡದ್ದೇ ಪರಮಾಮೃತವಾಗಿ ಸವಿದ ಗುಣವಂತೆ ಬಹು ಕಾಲ ಬಾಳುವ ಭಾಗ್ಯ ಹೆತ್ತಕೂಸಿನೊಂದಿಗೆ ಇದ್ದ ಇಬ್ಬರ ಮಕ್ಕಳನ್ನು ತಬ್ಬಲಿಗಳನ್ನಾಗಿ ಮಾಡಿ ಕಣ್ಣು ಮುಚ್ಚಿದ ಮುತ್ತೈದೆ. ಆ ಸಮಯದಲ್ಲಿ ಅಚ್ಚಳಿಯದೇ ಇಂದಿಗೂ ಸ್ಮರಣೆಯಲ್ಲಿರುವ ಒಂದು ಘಟನೆ ಜೋಳದರಾಶಿ ಊರಿಗೆ ಎರಡು ಮೈಲುಗಳ ಅಂತರದಲ್ಲಿ ಚೇಳ್ಳಗುರಿಕೆ ಗ್ರಾಮ. ಅಲ್ಲಿ ಮಹಾತ್ಮರಾದ ಎರ್ರಿಸ್ವಾಮಿಗಳು ನೆಲೆಸಿದ್ದರು. ಅನೇಕ ಜನರು ತಮ್ಮ ಸಾಂಸಾರಿಕ ಆಪತ್ತು ವಿಪತ್ತುಗಳಲ್ಲಿ ತಾತನ ದರ್ಶನಾಶೀರ್ವಾದ ಪ್ರಸಾದಗಳನ್ನು ಪಡೆಯುತ್ತಿದ್ದರು. ತಾತಾ ಮೌನಿ ದರ್ಶನಕ್ಕೆ ಹೋದವರ ಭಾಗ್ಯ ವಿಶೇಷಕ್ಕೆ ತಕ್ಕ ಒಂದು ಮಾತು ಆಡಿದರೆ ಆಡಿದ ಇಲ್ಲದಿದ್ದರಿಲ್ಲ.

ಗೌಡರ ತಾಯಿಯ ಬಗ್ಗೆ ಕೇಳಲು ಕಾತುರತೆಯಿಂದ ಗೌಡರ ತಂದೆಯವರು ಹೊರಟಾಗ ಗೌಡರು ಹಿಂದೆ ಹೋದರು. ಗೌಡರ ತಾತಕೂತಿದ್ದ, ಗೌಡರು ಹೋದ ಕೂಡಲೆ 'ಹೋಗಯ್ಯ ಬಾಯಿ ಬಾಯಿ ಬಡುಕೋ" ಎಂದು ತಟ್ಟನೆ ನುಡಿದು ಬಿಟ್ಟರು, ನಿರಾಶೆಯಿಂದ ತಿರುಗಿ ಬರುವಾಗ ತಾಯಿ ತೀರಿ ಹೋಗಿ ಮನೆಯು ಶೋಕದ ಕಡಲಾಗಿತ್ತು.

ಆಯುಷ್ಯ ತೀರಿದವರಿಗೆ 'ಕಾಲ' ಮೃತ್ಯುವಾದರೂ, ಬದುಕಿ ಬಾಳುವವರಿಗೆ ಅಮೃತವಾಗಿ, ಅವಲಂಬನೆಯಾಗಿ ನಿಲ್ಲುತ್ತದೆಂಬುದಕ್ಕೆ ಸಾಕ್ಷಿಯಾಗಿ ಅವ್ವ ತಾತಂದಿರ ಮಮಕಾರ, ವಾತ್ಸಲ್ಯಗಳಿಂದ ಬಹು ಸುಖವಾಗಿ ಬೆಳೆದುಕೊಂಡು ಬಂದರು, ಗೌಡರು.

ಗೌಡರ ತಂದೆಯ ತ್ಯಾಗ ಬಹುದೊಡ್ಡದು, ಗೌಡರ ತಂದೆ ಪಂಪನಗೌಡರು ಮತ್ತೊಂದು ಮದುವೆಯಾಗಲಿಲ್ಲ, ಇದ್ದ ಇಬ್ಬರು ಮಕ್ಕಳಿಗೆ ತೊಂದರೆಯಾಗಬಹುದೆಂದು ಮತ್ತು ಮಾವನ ಅವಲಂಬನೆಯಲ್ಲಿ ಕೊರತೆಯಾಗಬಹುದೆಂದು ಸದಾ ತನ್ನ ಮಾವನ ಒಕ್ಕಲುತನದಲ್ಲಿ ಮಗ್ನವಾಗಿ ಮನೆತನದ ಗೌರವಕ್ಕೆ ಕುಂದಾಗದೆ ಸಾಗಿಕೊಂಡು ಬಂದರು, ಗೌಡರು ಮತ್ತು ತಂಗಿ ನೀಲಮ್ಮ, ಆಗ ಕುಟುಂಬದಲ್ಲಿ ಇವರಿಬ್ಬರೇ ಮಕ್ಕಳಾದ್ದರಿಂದ ಎಲ್ಲರೂ ಬಹುಲೋಭದಿಂದ ಬೆಳೆಸಿಕೊಂಡು ಬಂದರು. ಜೋಳದರಾಶಿಗೆ ಬಂದ ಉರವಕೊಂಡೆಯ ಶಿಪೂಜಾ ಸಂಪನ್ನರಾದ ಚೆನ್ನಬಸವ ಸ್ವಾಮಿಗಳು, ರಾತ್ರಿ 8 ಗಂಟೆಗೆ ಗೌಡರ ಮನೆಯಲ್ಲಿ ಲಿಂಗ ಪೂಜೆಯಲ್ಲಿರುವಾಗ, ಇವರ ತಾತ ಬಹಿರ್ದೆಶಕ್ಕೆ ಹೋಗಿ ಬರುವಾಗ ಹಾದಿಯಲ್ಲಿದ್ದ ಬಂಜೆ ದೊಡ್ಡಿಯಿಂದ ಗುಂಡು ದಾರಿಸಿದರು, ಆ ಗುಂಡು ಬೆನ್ನ ಹಿಂದಿನ ಅಂಗಿಯಲ್ಲಿ ತೂರಿ ಬೆನ್ನು ಸದರಿ ಹೋಯಿತು, ಯಾವ ಅಪಾಯವೂ ಆಗಲಿಲ್ಲ, ಮಹಾಧೈರ್ಯಸ್ಥನಾದ ಇವರ ತಾತ ಗುಂಡು ಹಾರಿದ ಕೂಡಲೇ ಹಿಂದಕ್ಕೆ ತಿರುಗಿ ನೋಡಿದಾಗ ಸೋದರಳಿಯ ನನ್ನು ಕಂಡು ಕೆಂಡವಾಗಿ, ಎಂಥಾ ಕೆಲಸ ಮಾಡಿದೆಯಲ್ಲೋ ವಿರೂಪಾಕ್ಷ ಎಂದು ಹಿಡಿಯಲು, ಹೋದಾಗ ಸಿಕ್ಕಿದೆ ಓಡಿಹೋದ ಕ್ಷಣದಲ್ಲಿಯೇ ಊರವರು ಸೇರಿ ಈ ಘಟನೆಯನ್ನು ಕೇಳಿ ಉಗ್ರರಾದರು. ಪೋಲೀಸ್ ರಿಪೋರ್ಟ್ ಬರೆಸಿದರು, ಶಿವಪೂಜೆ ಮುಗಿಸಿ ಹೋರಬಂದ ಸ್ವಾಮಿಗಳು ಇದೆಲ್ಲವನ್ನೂ ನೋಡಿ "ಹೊನ್ನಪ್ಪ ಮೂಲಕರ್ತ ಕರಿಬಸಪ್ಪ ಸ್ವಾಮಿಗಳ ಕೃಪೆಯಿಂದ ನೀನುಳಿದೆ, ಎಂತವನಾದರೂ ಅವನು ನಿನ್ನ ಸೋದರಳಿಯ ಹೊಟ್ಟೆ ಬರೆದುಕೊಂಡರೆ ಕಾಲ

ಮೇಲೆ. ಪೊಲೀಸು ಕೇಸು ಬೇಡಪ್ಪಾ ಅವನು ಮಾಡಿದ್ದು ಅವನುಣ್ಣುತ್ತಾನೆ" ಎಂದರು "ಬುದ್ಧೀ ತಮ್ಮ ಅಪ್ಪಣೆಯಂತಾಗಲಿ" ಎಂದು ಗೌಡರ ಪಾತ ಆಗಲೇ ಲಿಂಗಪೂಜೆಯನ್ನು ಮುಗಿಸಿ ಲಿಂಗದ ತೇಜೋವಿಲಾಸದಿಂದ ಬೆಳಗುತ್ತಿದ್ದ ಮಹಾಸ್ವಾಮಿಗಳ ಪಾದಕ್ಕೇರಗಿದರು. ಮಹಾಸ್ವಾಮಿಗಳ ಲಿಂಗಪೂಜೆ ಫಲವೇ ಅಂದು ಗೌಡರ ತಾತನನ್ನೂ ಆತನ ಬಯಕೆಯ ಕೂಸಾದ ನನ್ನನ್ನು ರಕ್ಷಿಸಿದ್ದು ಮಾತ್ರ ಸತ್ಯ.

ಗೌಡರ ತಂದೆಯವರಿಗೆ ಈ ಘಟನೆ ನಡೆದತರುವಾಯ ತಾತ ಮೊಮ್ಮಗನನ್ನು ನೋಡಿಕೊಳ್ಳುವ ದುಷ್ಟರ ಕೈಯಿಂದ ರಕ್ಷಿಸಿಕೊಳ್ಳುವ ಹೊಣೆ ಅತ್ಯಂತ ಭಾರವಾಗಿ ಪರಿಣಮಿಸಿತು, ಅಂದು ಗುಂಡು ಹಾರಿಸಿದ್ದು ಹುಸಿ ಹೋಗದಿದ್ದರೆ ನಾನಿಂದು ಏನಾಗುತ್ತಿದ್ದೇನೋ? ಗೌಡರ ಜೀವನದ ಗತಿಯೇ ಬೇರೆಯಾಗುತ್ತಿತ್ತು. ಇದಾದ ಕೂಡಲೇ ವಿರೂಪಾಕ್ಷಪ್ಪನ ಸಂಬಂಧ ಗೌಡರ ಮನೆಗೆ ತಪ್ಪಿಹೋಯಿತು, ಬಹಳರೀತಿ ಪಶ್ಚಾತಾಪದಿಂದ ಬೇಡಿಕೊಂಡರೂ ಮಾವನವರು ಬರಗೊಡದೆ ಕೆಡುಕನ್ನೂ ಮಾಡದೆ, ಹೊಲಮನೆಗಳಿತ್ತು ಮದುವೆಗೆ ಹಣವಿತ್ತು ಮಿಂಚೇರಿಯಲ್ಲಿಯೇ ಇರಲು ಅನುಕೂಲ ಮಾಡಿಕೊಟ್ಟರು. "ಅವನು ವಿಷಭೀಜ ಅವನನ್ನು ಉಳಿಸಬಾರದು, ನೀವು ಅವನಿಗೆ ಸಹಾಯ ಮಾಡುತ್ತೀರಲ್ಲ" ಎಂದು ಗೌಡರ ತಂದೆಯು ಸಿಟ್ಟಾಗಿ ಕೇಳಿದಾಗ "ಲೇ ತಮ್ಮ ಉಪಕಾರ ಮಾಡಿದವರಿಗೆ ಉಪಕಾರ ಮಾಡುವುದೇನು ದೊಡ್ಡದಲ್ಲ, ಅಪಕಾರ ಮಾಡಿದವರಿಗೆ ಉಪಕಾರ ಮಾಡುವುದೇ ಘನತೆಯಪ್ಪಾ" ಎಂದು ಸಮಾಧಾನ ಹೇಳುತ್ತಿದ್ದರು, ರಕ್ತ ಸಂಬಂಧವು ಅವರನ್ನು ಮೃದುವಾಗಿ ಮಾಡಿತು.

**ಒಲ್ಲದ ಮದುವೆ :**

ಈ ದುರಂತ ಘಟನೆಯಿಂದ ಕದಡಿದ ಕುಟುಂಬವು ನೆಮ್ಮದಿಯ ಒಂದು ನಿಲುವಿಗೆ ಬಂದ ತರುವಾಯ ಗೌಡರ ಮದುವೆಯ ವಿಚಾರವು ಎದ್ದಿತ್ತು, ದೂರದ ಹೆಣ್ಣನ್ನು ತಂದುಕೊಳ್ಳಲು ಗೌಡರ ತಾತ ಹಿಂಜರಿದ ದೊಡ್ಡ ಕುಟುಂಬದ ನಿರ್ವಹಣೆಯಲ್ಲಿ ನಾನಾ ರೀತಿಯ ಕಹಿ, ಅನುಭವಗಳನ್ನುಂಡು ಕಡೆಗೆ ಸೋದರಳಿಯನಿಂದ ಪಡೆದ ಅಪಾಯಕರ ವಿಪತ್ತು. ಮೊಮ್ಮಗನು ಪಡೆಯುವಂತಾಗಬಾರದೆಂದು ಇದ್ದೂರಲ್ಲಿಯೇ ಉತ್ತಮ

ಕುಟುಂಬದವರೆಂದು ನಂಬಿಕೆಯಾದ ಚಿಲುಕರಾಯ ಹನುಮಂತಪ್ಪನವರ ಮೂರನೆ ಮಗಳನ್ನು ತಂದುಕೊಳ್ಳಲು ನಿಶ್ಚಯಿಸಿದರು, ಈ ಕನ್ಯೆಯನು ಮಾಡಿಕೊಳ್ಳುವ ಇಷ್ಟ ಗೌಡರಿಗೆ ಇರಲಿಲ್ಲ ಮತ್ತು ತಂದೆ-ಅವ್ವನವರಿಗೂ ಇರಲಿಲ್ಲ. ದಿನ ಬೆಳಗಾದರೆ ಒಬ್ಬರೊಬ್ಬರ ಬಾಳುವೆಯ ಕುಂದು-ಕೊರತೆಗಳು ಕೈಗನ್ನಡಿಯಂತೆ ಕಾಣುವ ಇದ್ದೂರ ಸಂಬಂಧ ಯೋಗ್ಯವಲ್ಲವೆಂಬುದೇ ಮುಖ್ಯ ಕಾರಣವಾಗಿತ್ತು, ಅನುಮಾನಾಸ್ಪದವಾದ ಪರದೂರಿನ ಸಂಬಂಧಕ್ಕಿಂತ ಇದ್ದೂರ ಸಂಬಂಧವೇ ಅನುಕೂಲವೆಂಬುದು ಗೌಡರ ಅಭಿಪ್ರಾಯ ಇನ್ನೊಂದು ಅಂಜಿಕೆ ಮೊಮ್ಮಗನಿಗೆ ವಿಷವಿಕ್ಕಿ ಕೊಲೆ ಮಾಡಬಹುದೆಂಬುದು ಯಾರೆಷ್ಟು ಅತಂತ್ರಗಳನ್ನೊಡ್ಡಿದರೂ ಕೊನೆಗೆ ನನಗೇನೇನೋ ಹೇಳಿ ಇದ್ದೂರ ಸಂಬಂಧವನ್ನು ಗಂಟು ಹಾಕಿದರು.

ಇಷ್ಟವಿಲ್ಲದ ಸಂಸಾರ ಗೌಡರ ಕೊರಳಿಗೆ ಸುತ್ತಿಕೊಂಡಿತು ಹಿರಿಯರ ಆಸರೆಯಲ್ಲಿ ನಡೆದ (ವಡೆದ) ಗೌಡರ ದಾಂಪತ್ಯದ ವಿರಸದಬಾಳು ಹೊರಹೊಮ್ಮಿ ಜಗಳಾಟಕ್ಕಿಳಿಯದಿದ್ದರೂ ಒಳಗೊಳಗೇ ಆಯಿಷ್ಟದ ಅಗ್ನಿಕುಂಡ ಕುದಿಯುತ್ತಿತ್ತು, ಇಂತಹ ಸ್ಥಿತಿಗೆ ಪ್ರಬಲ ಕಾರಣಗಳೇನೂ ಇರಲಿಲ್ಲ. ಗೌಡರ ಹೆಂಡತಿ ಸಂಪ್ರದಾಯಸ್ಥರ ಮನೆಯಿಂದಲೇ ಬಂದಿದ್ದಳು, ಬಾಲ್ಯದಲ್ಲಿಯೇ ಕಷ್ಟದಲ್ಲಿ ಬೆಳೆದು ಬಂದಿದ್ದರಿಂದ ಹೆಣ್ಣಿನ ಸಹಜ ಕೋಮಲತೆಗಳಿಗೆ ದೂರಾಗಿ, ನಲ್ಮೆಯ ಸ್ಥಿತಿಗೆ ಪೋಷಕವಾಗಿರಲಿಲ್ಲ, ಪುರುಷ ಪ್ರಕೃತಿಯ ವರಟುತನಗಳು ಮೈಗೂಡಿದ್ದವು, ಸಾಧಾರಣ ಲಕ್ಷಣವಾಗಿ ಕಾಣುತ್ತಿದ್ದರೂ ಮಾತಾಡಿದರೆ ಬಿರಿಸು, ಕೊಂಡು ಅದೂ, ಗುಕ್ಕು, ಗಂಡನ ಮೇಲಿನ ಅಭಿಮಾನಕ್ಕಿಂತ ತಂದೆಯ ಮೇಲಿನ ಅಭಿಮಾನವೇ ಹೆಚ್ಚೆಂದು ನಂಬಿದ ವರ್ತನೆಯು ಸಂಸಾರದಲ್ಲಿ ಸರಳತೆ-ಸಮಾಧಾನ, ಪ್ರೀತಿಗಳನ್ನು ಕಾದು ಕೂಡಲಿಲ್ಲ, ಈ ಎಲ್ಲಾ ಗುಣಗಳು ಸಾಮಾನ್ಯವಾಗಿ ಹೊಸ ಸಂಸಾರಕ್ಕೆ ಕಾಲಿಕ್ಕುವ ಹೆಣ್ಣಿಗಿರುವುದು ಸಾಮಾನ್ಯವಾದರೂ ಪ್ರೀತಿಯಿಂದ ಆ ಗುಣಗಳನ್ನು ತಿದ್ದಿಕೊಂಡು ತನ್ನ ಗುಣಾನುದಾರ ನಡೆಯಿಸುವ ನಲ್ಮೆಯು ಆ ಏರುಜವ್ವನದಲ್ಲಿ ನನಗಿರಲಿಲ್ಲ. ನಾಟಕದ ವಿಲಾಸಕ್ಕೆ ಮೈಯೊಗ್ಗಿದ ನನಗದು ಬೇಕಿರಲಿಲ್ಲ, ಇಷ್ಟವಿಲ್ಲದ ಅನಿಷ್ಟವನ್ನು ಗಂಟುಹಾಕಿದ ಹಿರಿಯವರಲ್ಲಿಯೂ ಗೌಡರಿಗೆ ಬೇಸರವಾಯಿತು, ಗೌಡರ ತಾತ ಒಳಗೊಳಗೆ ಸಂಕಟಕ್ಕೀಡಾದ ಇದ್ದೂರ ಬಾಂಧವ್ಯವು ಮೊದಲಿದ್ದ ಸಿಹಿಯಿಂದ ಜಾರಿ ಕಹಿಯಾಗಿ ಮೇಲೇರಿತು.

ಗೌಡರ ತಾತ ಬೇನೆಯಿಂದ ಕುಗ್ಗಿ ಹೋಗಿದ್ದಾರೆ, ಆದ್ದರಿಂದ ಇವರ ತಂದೆಗೆ ಚಿಂತೆ, ಮಗಳು ನೀಲಮ್ಮ ಮದುವೆ ಮಾಡಬೇಕು. ತಾತ ಸಾಯೋದ್ರೊಳಗೆ ಅನ್ನುವ ಚಿಂತೆ ಗೌಡರ ತಂದೆಗೆ ಬಾಪುರದ ಹಿರೇಗೌಡ ನೊಂದಿಗೆ ತಂಗಿಯ ಲಗ್ನ ಸಮಾರಂಭವನ್ನು ಯಶಸ್ವಿಯಾಗಿ ನಡೆಯಿಸಿದರು.

ಮದುವೆಯಾದ ತರುವಾಯ ಬೇನೆ ಹೆಚ್ಚಾದುದರಿಂದ ಗಚ್ಚಿನ ಮನೆಯಿಂದ ಸಣ್ಣ ಹೊಸಮನೆಯಲ್ಲಿ ಔಷದೋಪಚಾರಗಳು ನಡೆದವು, ಅಂಗಾಂಗಗಳು ಕುಗ್ಗಿದರೂ ದೊಡ್ಡ ಎಲುಬಿನ ಆಳು ಇನ್ನೂ ಶಕ್ತಿವಂತನಾಗಿಯೇ ಇದ್ದರು, ಹೊಲಕ್ಕೆ ಹೋಗಿ ಬರುವಷ್ಟು ಬಲವಿಲ್ಲದಿದ್ದರೂ ಮನೆಯಲ್ಲಿ ಅಡ್ಡಾಡಿ ಬಹಿರ್ದೆಶಕ್ಕೆ ಹೋಗಿ ಬರುವಷ್ಟು ಶಕ್ತಿಯಿಂದಲೇ ಇದ್ದು ಹಾಸಿಗೆ ಹಿಡಿಯದೆ ಎಲ್ಲಾ ವ್ಯವಹಾರಗಳಲ್ಲಿ ಆಸಕ್ತಿ ವಹಿಸುತ್ತಿದ್ದರು.

ತಮ್ಮ ಜೀವನದುದ್ದಕ್ಕೂ ಬಹುಕಷ್ಟಪಟ್ಟು ಒಕ್ಕಲು ತನವನ್ನು ಆಳುಗಳು ಬೆರಗಾಗುವಂತೆ ಮಾಡಿ, ಸೂಕ್ಷ್ಮಗ್ರಾಹಿಯಾಗಿ ಊರಿನ–ಊರವರ ಸ್ವಭಾವಗಳನ್ನುರಿತು ಅವರವರಿಗೆ ಅನುಕೂಲ ಕಾರ್ಯಗಳಲ್ಲಿ ಸಹಕರಿಸಿ, ಬುದ್ಧಿವಂತಿಕೆಯಿಂದ ಎಲ್ಲರನ್ನೂ ಮಿತ್ರರಂತೆ ಅಂಕಿತದಲ್ಲಿಟ್ಟುಕೊಂಡು ತನ್ನ ಕುಟುಂಬ, ತಕ್ಕ ಆಸ್ತಿ, ಗೌರವ ಘನತೆಗಳನ್ನು ಬೆಳೆಸಿಕೊಂಡು ಹಿರಿಯ–ಕಿರಿಯ ಭೇದ ವಿಲ್ಲದೆ ಎಲ್ಲರ ಗೌರವಕ್ಕೆ ಪಾತ್ರನಾಗಿ ಈ ಊರಿನ ಧಣಿಯೆಂದೆನಿಸಿಕೊಂಡು ಯೌವನ ಕಾಲದಲ್ಲಿ ಶಕ್ತಿ–ಸಾಮರ್ಥ್ಯಗಳಿಂದ ಅರಿವಿ ಗುಂಡುಗಳೆತ್ತಿ ಹಿಡಿದವರನ್ನು ಕಾಣದೆ, ತನ್ನ ಅಣ್ಣನ ಕಾಲದಲ್ಲಿ ಬೆಳೆದ ದ್ವೇಷಗಳೆಲ್ಲವನ್ನೂ ನಿಗ್ರಹಿಸಿ ಲೋಕವ್ಯವಹಾರದಲ್ಲಿ ದಕ್ಷನೆನಿಸಿ, ಕೊನೆಗೆ ತನ್ನ 64ನೇ ವರುಷದಲ್ಲಿ ತನ್ನ ಅಣ್ಣನಿಗೆ ಬಂದ ಕ್ಷಯರೋಗವೇ ಇದೆಂದು ಬಹುಮಟ್ಟಿಗೆ ಗ್ರಹಿಸಿದ್ದನೆಂದು ಒಂದು ದಿನ ಕರಿಯಪ್ಪನೊಡನೆ ಮಾತನಾಡುವಾಗ ತಿಳಿದು ಬಂತು, "ಲೇ ಕರಿಯಾ ನೀನು ಹೇಳದಿದ್ದರೂ, ಈ ಬೇನೆ ಹೇಳದಾಗಿರುತ್ತೇನಯ್ಯಾ? ನಿನಗೆಲ್ಲಾ ಗೊತ್ತು ಕಳ್ಳ" ಎಂದು ಪರಿಹಾಸ್ಯ ಮಾಡುತ್ತಾ "ಈಗ ನೋಡು" ಎಂದು ಕೈ ಚಾಚಿದರು. ಐದು ನಿಮಿಷ ನಾಡಿಯನ್ನು ಪರೀಕ್ಷಿಸಿ ವಿಷಾದದಿಂದ ವೈದರು ಸುಮ್ಮನೆ ಕುಳಿತರು. "ಯಾಕೋ ಸುಮ್ಮನಾದಿ ಏನಂತಿ" ಎಂದಾಗ "ನಾನೇನನ್ಲಿ

ಮಾವ. ನಿಮ್ಮ ಕೋರಿಕೆ ಇದ್ದದ್ದು ಬೇಗ ಮಾಡಿಕೊಳ್ರಿ" ಎಂದು ಕಣ್ಣು ತುಂಬಿಕೊಂಡು ಬರುವ ನೀರನ್ನು ಒರಸಿಕೊಂಡು ಮನೆಗೆ ಹೋದರು.

ಸಣ್ಣಗೌಡರನ್ನು ನೋಡಲು ಗ್ರಾಮದ ಜನರು ಬರುತ್ತಾರೆ. ಆಗ ಸಣ್ಣಗೌಡರು ಕಾಲತೀರದ ಮೇಲ ಯಾರು ಉಳೀತಾರೋ, ಎಂದು ಅಲ್ಲಿ ಕುಳಿತವರೆಲ್ಲರ ಮುಖಗಳನ್ನು ನೋಡಿ ಹೃದಯ ತುಂಬಿ "ಊರಿನ ಗೌರವ ಕೆಡದಂತೆ ನೋಡಿಕೊಂಡು ಬರ್ರಿ" ಪಂಪನಗೌಡನಿಗೆ ಗ್ರಾಮದ ವ್ಯವಹಾರ ತಿಳಿಯದು, ನಮ್ಮವ ದೊಡ್ಡಿ ಇನ್ನೂ ಸಣ್ಣವ, ಇವರ ಮೇಲೆ ನಿಮ್ಮಭಿಮಾನದ ಕಣ್ಣಿರಲಿ, ಇದುವರೆಗೂ ನನ್ನನ್ನು ನೋಡಿಕೊಂಡು ಬಂದಂತೆ ಈಮನೆತನವನ್ನೂ ನೋಡಿಕೊಂಡು ಬರ್ರಿ, ಏನು ಮನಸ್ತಾಪಗಳು ಬಂದರೂ ನಿಮ್ಮ ನಿಮ್ಮೆಲ್ಲೆ ಬಗೆಹರಿಸಿಕೊಂಡು ದುರಭಿಮಾನಗಳಿಗೆ ಆಸ್ಪದ ಕೊಡದೆ ಎಲ್ಲರೂ ಒಗ್ಗಟ್ಟಾಗಿ ಊರಿನಲ್ಲಿ ನಡೆದುಬಂದ ಕೆಲಸಗಳನ್ನು ಮಾಡ್ರಿ, ನಿಮಗೆಲ್ಲಾ ನಮಸ್ಕಾರ" ಎಂದು ನಿಶ್ಯಕ್ತವಾದ ಎರಡು ಕೈಗಳೆತ್ತಿ ಎಲ್ಲರಿಗೂ ವಂದಿಸಿದಾಗ ಈ ಕರುಣಾಮಯ ವಾತಾವರಣವು ಎಲ್ಲರ ಕಣ್ಣಂಚಿನಲ್ಲಿ ನೀರಿಳಿಸಿತು.

ಇದೆಲ್ಲವನ್ನೂ ಕೇಳುತ್ತಾ, ನೋಡುತ್ತಾ ಮುಗ್ದರಾಗಿ ಕುಳಿತ ಆಳುಗಳಲ್ಲಿ ತಮ್ಮ ತಾತಂದಿರಿಂದ ದುಡಿದು ಓಲೈಸುತ್ತಾ ಬಂದಿದ್ದ ಸಣ್ಣ ವೀರಪ್ಪನು ತಡೆಯಲಾರದೆ "ರೆಡ್ಡಿ ಮಾಗತೇಮಿ" (ಗೌಡ ನಮ್ಮತಿ ಏನು?) ಎಂದು ಹಸುಗೂಸಿನಂತೆ ಅಬ್ಬರಿಸಿ ಅತ್ತು ಬಿಟ್ಟ. ಬಂದ ಕಣ್ಣೀರನ್ನು ತಡೆಯುವ ಯತ್ನದಲ್ಲಿದ್ದವರೆಲ್ಲಾ ಇವನ ಮುಗ್ದತನದದ ದುಃಖದಿಂದ ಬಿಕ್ಕಳಿಸಿದರು. "ಪಿಚ್ಚೋಡಾ ನೇನಾನ್ನಾಳ್ಳುಂಟಾನ್ರಾ ನೇನು ಪೋತೆ ಮೀ ರೆಡ್ಡಿ ಲೇದಾ" ಎಂದು ಸಂತೈಕೆಯದನಿಯಲ್ಲಿ ಅಳಿಯನ ಕಡೆ ನೋಡಿದರು. ಅದುವರೆವಿಗೂ ಹೇಗೋ ತಡೆದಿದ್ದ ತಂದೆಯವರು ದುಃಖವನ್ನು ತಡೆಯಲಾರದೆ ಆ ಯಾಳಿನಂತೆ ತಾನೂ ಆಗಿ "ಮಾವಾ ನನಗೇನು ಹೇಳ್ತಿ" ಎಂದಾಗ "ಯಲಾ ಹುಚ್ಚು ಇನ್ನು ಮೇಲೆ ಯಲ್ಲಾ ನಿನ್ನ ಕೈ ಮೇಲೆ ನಡೆಯಬೇಕು, ನಿನಗೆ ನಾನೇನು ಹೇಳಲಪ್ಪಾ" ಎಂದು ಒಂದು ಮೂಲೆಯಲ್ಲಿ ಅಳುತ್ತಾ ಕುಳಿತ ನನ್ನ ಕಡೆ ನೋಡಿ ನಿನ್ನ ಮಗ ನಿನ್ನ ನೋಡ್ತಾನಪ್ಪ ಎಂದು ಮುಂದಿನ ಭರವಸೆಯನ್ನಿತ್ತರು.

ವಿಪರೀತ ಸಂಕಟದಿಂದ ಹಾಸಿಗೆಯ ಮೇಲೆ ವದ್ದಾಡಹತ್ತಿದರು. ಅದುವರೆಗೂ ತಮ್ಮ ಪೆಟ್ಟಿಗೆಯ ಬೀಗದಕೈಗಳು ಅಳಿಯನಿಗೆ ಕೊಟ್ಟಿರಲಿಲ್ಲ. ಆಗ ಈ ಬೀಗ ತಗೋಪ್ಪ ಪೆಟ್ಟಿಗೆಯಲ್ಲಿ ರೂಪಾಯಿ ಇವೆ. ದಿನ ವಾರಗಳಿಗೆ ಉಪಯೋಗಿಸಿಕೋ" ಎಂದಾಗ ತಂದೆಯವರು ಉಡುದಾರಕ್ಕಿದ್ದ ಬೀಗದ ಕೈ ಬಿಟ್ಟಿಕೊಂಡರು, ಬಹುಕಾಲ ಯಾಜಮಾನ್ಯ ನಡೆಸಿದ ಬೀಗದ ಕೈ ಇಂದು ಕೊನೆಯ ಕ್ಷಣದಲ್ಲಿ ನಡುವಿನಿಂದ ಅಗಲಿತು, ತರುವಾಯ ಯಾವ ಮಾತು ಆಡಲಿಲ್ಲ ಇಹಲೋಕದ ಜಂಜಡದಿಂದ ಜೀವಾತ್ಮನು ಜಾರಿ ಪರಲೋಕಕ್ಕೆರುವ ಸಿದ್ದತೆಯಲ್ಲಿರುವ ಎಲ್ಲಾ ಲಕ್ಷಣಗಳು ದೇಹದಲ್ಲಿ ಮೂಡಿದವು, ಅಷ್ಟರಲ್ಲಿ, ಕೆಲವರು ಉಂಡುಬಂದರು, ರುದ್ರಮ್ಮ ಬೋಗಮ್ಮನವರು ಕೊನೆಯ ಗಳಿಗೆಯಲ್ಲಿ ತಮ್ಮ ಗಂಡನನ್ನು ಬಿಟ್ಟೇಳದೆ ಅಲ್ಲಿಯೇ ಕುಳಿತಿದ್ದರು, ತಂದೆಯವರು ಇತರರು ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಿದ್ದರು, ಯಜಮಾನ ಹೇಳಿದ್ದು ಜ್ಞಾಪಕಕ್ಕೆ ಬಂದು ಹೊರ ಬಂಕಕ್ಕೆ ಸ್ಮತಿಯಿಲ್ಲದ ತಾತನನ್ನು ಎತ್ತಿಕೊಂಡು ಹೋದರು, ಅದೇ ಗಳಿಗೆಯಲ್ಲಿಯೇ ಪ್ರಾಣವಾಯುವು ಹಾರಿಹೋಯಿತು. "ಮರಣವೇ ಮಹಾನವಮಿ" ಎಂದು ಮೃತ್ಯುಭಯರಾಹಿತ್ಯವನ್ನು ಜಗತ್ತಿಗೆ ಸಾರಿದ ಶರಣರಂತೆ ಎಲ್ಲರಿಗೂ ನಿರ್ಭಯವನ್ನು ನೀಡಿ ಪರಮ ಶಾಂತಿಯಿಂದ ಕೊನೆಯುಸಿರಿಕ್ಕಿದ, ಈ ಪುಣ್ಯಮಯ ಜೀವನದ ಮಂಗಲಾಂತ್ಯ ಸ್ವರೂಪವು ಯೋಗಿಗಳಿಗೂ ದುರ್ಲಭವಾದದು.

ಜೋಳದರಾಶಿ ಗ್ರಾಮ ಕುಟುಂಬದವರ ಋಣದಿಂದ ಮುಕ್ತವಾದ ಸಣ್ಣಹೊನ್ನನಗೌಡರ ಭೌತಿಕ ದೇಹವು ವಿಜೃಂಭಣೆಯಿಂದ ಹೊರಟಿತು.

ಮನೆತನದ ಭಾರ, ಊರ ವ್ಯವಹಾರ ಭಾರಗಳು ಗೌಡರ ಚಂದೆಯವರ ಹೆಗಲೇರಿದವು. ಅವರ ಮಾವನವರ ಕೊನೆಯ ಕೋರಿಕೆಯಂತೆ ಗ್ರಾಮದ ರಾಮಲಿಂಗೇಶ್ವರ ಗುಡಿಯ ಜೀರ್ಣೋದ್ಧಾರಕ್ಕೆ ಕೈಯಿಕ್ಕಿದರು, ಅದೇ ವೇಳೆಗೆ ಚಟಪಟನೆ ಕೃಷಿ ಸಂಪತ್ತಿನ ಮೂಲವಾದ ಹದಿನಾರು ಎತ್ತುಗಳು ಸತ್ತುಹೋದವು ತಂದೆಯವರು ದಿಗ್ಭ್ರಾಂತರಾದರು. ಒಂದು ಕಡೆ ಕಿತ್ತಿದ ಗುಡಿಯನ್ನು ಕಟ್ಟಬೇಕೇ? ಎತ್ತುಗಳಿಲ್ಲದ ಒಕ್ಕಲುತನವನ್ನು ಸಾಗಿಸಬೇಕೆ? ಎಂಬ ಜಟಿಲತೆಯು ಆವರಿಸಿತು, ಹೀಗೆ ನಾಲ್ಕು ದಿನ ಸ್ತಬ್ಧರಾಗಿದ್ದು ಕೊನೆಗೊಂದು ನಿರ್ಣಯಕ್ಕೆ ಬಂದು ಭೂತಾವೇಶವಾದಂತೆ ಆದ ನಷ್ಟದ ಗೊಡವೆಯಿಲ್ಲದೆ ಗುಡಿಯ

ಜೀರ್ಣೋದ್ಧಾರ ಒಕ್ಕಲುತನಗಳನ್ನು ಯಶಸ್ವಿಯಾಗಿ ನಡೆಯಿಸಿದರು. ಪರವಾಗಿಲ್ಲ ಮಾವನಿಗೆ ತಕ್ಕ ಅಳಿಯನೆಂದು ಊರವರು ಮೆಚ್ಚಿಕೊಂಡರು.

ಒಂದು ದಿನ ಗೌಡ ತಂದೆಯೊಂದಿಗೆ ಯಾವುದೋ ಮಾತಿಗಾಗಿ ಜಗಳ ನಡೆದು "ನನ್ನ ವಸ್ತ್ರ-ವಡವೆಯಲ್ಲ ಕೊಟ್ಟುಬಿಡು" ಎಂದು ರುದ್ರಮ್ಮನು ಸಿಟ್ಟಾಗಿ ಕೇಳಿದಳು. "ಅವರಾಗಿ ಅಭಿಮಾನದಿಂದ ಮನೆಯಲ್ಲಿದ್ದರೆ ಇಟ್ಟುಕೋ ಇಲ್ಲದಿದ್ದರೆ ವೀಲುನಾಮೆಯಲ್ಲಿ ಅವರಿಗೆ ಬರೆದದ್ದು ಕೊಟ್ಟು ಕಳಿಸು" ಎಂದು ಗೌಡರ ತಾತನವರು ಹೇಳಿಯೇ ಹೋಗಿದ್ದರು, ಅದರಂತೆ ಆಕೆಯ ಭಾಗಕ್ಕೆ ಬಂದ ಆಸ್ತಿಯನ್ನೂ ಕೊಟ್ಟು ತೌರುಮನೆಗೆ ಕಳಿಸಿಬಿಟ್ಟರು.

ಇಷ್ಟೆಲ್ಲಾ ಗೊಂದಲದಲ್ಲಿ ಸಾಯುವಾಗ ಗಂಡನು ಹೇಳಿದಂತೆ ನಡೆದಾಕೆಯೆಂದರೆ ದೊಡ್ಡ ತಾತನ ಹಿರಿಯ ಕುಟುಂಬ ನಾಗಮ್ಮಮ್ಮ ಒಬ್ಬಾಕೆಯೇ ಬಾಪುರದ ತೌರುಮನೆಯವರು ಸಂಪನ್ನ ಕುಟುಂಬಸ್ತರು ಭಯಸ್ತರು, ಬಡವರಾದರೂ ಅನ್ನ-ಬಟ್ಟೆಗಳ ಕೊರತೆಯಿಲ್ಲದವರು, "ಕಾಯಕವೇ ಕೈಲಾಸ" ವೆಂದು ನಂಬಿ ನಡೆದವರು. ಗೌಡರ ದೊಡ್ಡ ತಾತ ಈ ಮನೆಯಿಂದ ನಾಗಮ್ಮನನ್ನು ಕೈಹಿಡಿದು ಕರೆತಂದ ರೂಪ-ಸೌಂದರ್ಯಗಳಿಲ್ಲದಿದ್ದರೂ ಕೇವಲ ಗುಣ ಸೌಂದರ್ಯದ ಸೌಭಾಗ್ಯರಾಸಿಯಾಗಿದ್ದಳು. ಕೈಹಿಡಿದ ಗಂಡ ಆ ಕಾಲದ ನವನಾಗರಿಕ, ವಿದ್ಯಾವಂತ, ಊರಗೌಡ ವ್ಯವಹಾರ ಕುಶಲ, ಎಲ್ಲದಕ್ಕಿಂತಲೂ ನ್ಯಾಯ ನಿಷ್ಠುರ, ಒಮ್ಮೆ ಯಾವುದೋ ಸಂದರ್ಭದಲ್ಲಿ ತಾಯಿ ಶಿವಮ್ಮನಿಗೇನೇ ನಿಷ್ಟುರವಾಗಿ ನ್ಯಾಯ ಹೇಳಿ "ನಿನಗೆ ಬುದ್ಧಿಯಿಲ್ಲ" ಎಂದಿದ್ದನಂತೆ. ಈತನ ಶೀಲ ಪ್ರಾಮಾಣಿಕತೆ ದರ್ಪ ಠೀವಿಗಳಿಗಂದ ಊರ ಜನರು ದೂರ ನಿಂತೇ ಮಾತಾಡುತ್ತಿದ್ದರಂತೆ ಮೇಲಿನ ಉದ್ಯೋಗಿಗಳನ್ನು ಕಂಡಾಗ ಬಗ್ಗಿ ನಮಸ್ಕಾರ ಮಾಡಿ "ದ್ಯಾವರಾ" ಎನ್ನುವ ಗೌರ .ಕಾಲದಲ್ಲಿ ಅವರ ಸರಿಸಮವಾಗಿ ಲೋಡಿಗಾತು ಗೌಡಿಕೆಯ ಕಾರು-ಭಾರು ನಡೆಸಿದವರು, ದೊಡ್ಡ ಕುಟುಂಬಕ್ಕೆ ಮಕ್ಕಳಾಗಲಿಲ್ಲವೆಂಬ ಕಾರಣದಿಂದ ಮಿಂಚೇರಿಗೆ ಕೊಟ್ಟ ತಂಗಿಯ ಮಗಳಾದ ಗಂಗಮ್ಮನನ್ನೆ ಎರಡನೆಯ ಕುಟುಂಬವಾಗಿ ಮನೆಗೆ ತಂದು ಕೊಂಡಿದ್ದರು.

ಪಾಲಾಕ್ಷನಿಗೂ ಹೆದರದೆ ತನಗೆದುರಾದವರನ್ನು ಪಾತಾಳಕ್ಕೆ ತುಳಿದು ಬಿಡುವ ಕೆಚ್ಚು ಇವರದಂತೆ, ಆ ಕಾಲದಲ್ಲಿ ಇವರಿಗಿಂತ ದೊಡ್ಡ ಗ್ರಾಮದಲ್ಲಿ ಪ್ರಭಲಸ್ಥರಾಗಿದ್ದು ಇವರೊಂದಿಗೆ ದಿಟ್ಟತನದಿಂದ ಊರಲ್ಲಿಯು, ಸರಜಾರದಲ್ಲಿಯೂ, ವ್ಯಾಜ್ಯ ಮಾಡಿ ಮೂಮತ್ತಾರು ಹೇಳುತ್ತಿರುವುದು ಕೇಳಿರುವೆ.

ಇಂತಹ ಉದ್ದಂಡ ಗಂಡನೊಂದಿಗೆ ಪರಮ ಮುಗ್ದ ಸ್ವರೂಪಳಾದ ನಾಗಮ್ಮನು ಎಂತು ಬಾಳುವೆ ಮಾಡಿದ್ದಳೋ? ಹಳೆಯ ಮನೆಯಲ್ಲಿರಲು ಇಚ್ಛೆಯಿಲ್ಲದ ದೊಡ್ಡತಾತ ಒಂದು ವರುಷದಲ್ಲಿ ದೊಡ್ಡದಾದ ಎರಡಂತಸ್ತಿನ ಭವ್ಯ ಮನೆಯನ್ನು ಕಟ್ಟಿಸಿ ಗೃಹ ಪ್ರವೇಶ ಮಾಡಿದ ಒಂದು ವರುಷದೊಳಗಾಗಿಯೆ ಕ್ಷಯರೋಗಕ್ಕೆ ತುತ್ತಾದರಂತೆ. ಕಟ್ಟಿಸಿದ ಮನೆಯಲ್ಲಿ ಇರಲಿಲ್ಲ, ಸಾಯಲಿಲ್ಲ ಮತ್ತೆ ಮೊದಲಿದ್ದ ಹಳೆಯ ಮನೆಯಲ್ಲಿಯೇ ಪ್ರಾಣನೀಗಿದ, ಆಗ ಹೇಳಿದ ಮಾತು ನಾಗಮ್ಮ ಜೀವನದ ಕೊನೆಯವರಿಗೂ ಮರೆಯಲಿಲ್ಲ.

ದೊಡ್ಡ ತಾತನ ಎರಡನೇ ಕುಟುಂಬ ಗಂಗಮ್ಮನು ಗೌಡರ ಸಣ್ಣ ತಾತನ ಕಾಲದಲ್ಲಿಯೇ ಅನಿಷ್ಠಕರ ದುರಂತದಿಂದ ತೌರುಮನೆ ಸೇರಿದ್ದಳು, ಸಣ್ಣ ತಾತನ ಹಿರಿಯ ಕುಟುಂಬ ಬೋಗಮ್ಮಗೆ ಗಂಡನ ಮನೆಯೇ ತೌರುಮನೆಯಾಗಿ ಪರಿಣಮಿಸಿದ್ದರಿಂದ ತಮ್ಮಂದಿರ ಕುಟುಂಬದಲ್ಲಿಯೇ ಇರುವುದು ಸಹಜವಾಯಿತು. ಒಂದಲ್ಲದೊಂದು ರೀತಿಯಿಂದ ಈ ಕುಟುಂಬಕ್ಕೆ ಸುತ್ತು ಬಲ್ಲಿಯಂತೆ ಬೆಳೆದು ಸುತ್ತಿಕೊಂಡು ಬಳ್ಳಿಯ ಕಾಯಿಗಳೇ ಇವೆಲ್ಲ ಆದರೆ ನಾಗಮ್ಮನದು ಹಾಗಲ್ಲ. ಆಕೆಗೆ ಗಂಡನ ತರುವಾಯ ಸುತ್ತಿಕೊಳ್ಳುವ ರಕ್ತದ ಬಳ್ಳಿಯು ಯಾವುದು ಇಲ್ಲ. ಇರುವುದೆಲ್ಲಾ ಗಂಡನ ಕಡೆಯ ಮುಳ್ಳಿನ ಬಳ್ಳಿ ಇದನ್ನು ಸುತ್ತಿಕೊಳ್ಳುವ ಅವಸರವೇನೂ ಆಕೆಗಾರಲಿಲ್ಲ, ಆದರೆ ಗಂಡನ ಈ ಮನೆ ಬಿಡಬೇಡವೆಂಬ ಕೊನೆಯ ವಾಕ್ಯವೇ ವೇದವಾಕ್ಯವಾಗಿ ಪಾಲಿಸುವ ಪರಮಪತಿವ್ರತೆಯಾದಳು, ಗಂಡನೊಡನೆ ಮುತ್ತೈದೆಯಾಗಿದ್ದು ಆತನ ಸುಖ ದುಃಖಗಳಲ್ಲಿ ಭಾಗಿಯಾಗಿ ನಡೆವ ಪತಿವ್ರತೆಯರ ಪವಿತ್ರ ಕಥೆಗಳನ್ನು ಕೇಳಿದ್ದೇವೆ. ಆದರೆ ಗಂಡನ ತರುವಾಯ ಗಂಡನ ಬಳಗವೆಲ್ಲವನ್ನು ಕಟ್ಟಿಕೊಂಡು ಬಾಳುವೆ ಮಾಡಿ ಕಠೋರ ದುಃಖಗಳನ್ನುಣ್ಣುವ ಸಹನೆಯ ಬಾಳನ್ನು ನಡೆಯಿಸುವುದ ದುರ್ಲಭ.

ತಂದೆಯವರು ತಮಗೆ ಹತ್ತಿ ಹೊಂದಿದವರಿಂದಲೇ ನಾನಾ ಕಿರುಕುಳಕ್ಕೆ ಈಡಾಗಿ ಕೊನೆಗೆ ರಕ್ತ ಸಂಬಂಧದಿಂದ ತಾಳ್ಮೆ ವಹಿಸುವುದು ಸಹಜ, ಆದರೆ ನಾಗಮ್ಮನದು ಅವ್ಯಾಜ ಪ್ರೇಮ, ಎಲ್ಲರನ್ನು ಮಕ್ಕಳಂತೆ ನೋಡಿಕೊಂಡು ಬಂದಳು, ತಾಯಿಯನಂತರ ಗೌಡರಿಗೆ ತಾಯಿಯ ಋಣವನ್ನು ತೀರಿಸಲು ಸಾಧ್ಯವಿಲ್ಲ.

ಗೌಡರ ಅಜ್ಜಿ (ತಾಯಿಯ ತಾಯಿ) ಭೋಗಮ್ಮ ಮುಗ್ಧ ಸ್ವಭಾವದವರು. ಹೆಚ್ಚಿನ ಯಾವ ವಿಷಯದಲ್ಲಿಯು ಬಾರದೆ ಇದ್ದದ್ದು ಉಂಡು ಆದಷ್ಟು ಕೆಲಸ ಮಾಡುತ್ತಲಿದ್ದಳು. ಇವರಿಬ್ಬರೇ ಈ ಕುಟುಂಬದ ಆಧಾರವಾಗಿ ನಿಂತವರು, ಗೌಡರ ಹೆಂಡತಿಯ ಬಾಳುವೆಯ ಆವರಣ ಬಹುಚಿಕ್ಕದು ಗಂಡ ತಪ್ಪಿದರೆ ತಂದೆ ಇಷ್ಟೆ ಆವರಣದಲ್ಲಿ ಆಕೆಗೆ ಸಾಕುಸಾಗಿ ಹೋಗುತ್ತಿತ್ತು.

**3.2 – ಸಾಹಿತ್ಯ**

ಬಳ್ಳಾರಿ ನಾಟಕ ಮುಗಿದ ತುರುವಾಯ ಜೋಳದರಾಶಿ ನಾಟಕದಲ್ಲಿ ಯಾವ ಆಸಕ್ತಿ ವಹಿಸದೆ ಗೌಡರು ಸಾಹಿತ್ಯ, ಗಮಕಾಭ್ಯಾಸದಲ್ಲಿ ತೊಡಗಿದರು, ಬಾಲ್ಯದಿಂದಲೂ ಬಿಡದೆ ಹಿಡಿದುಕೊಂಡು ಬಂದ ಈ ಅಭಿರುಚಿಯು, ಗೊಂದಲಮಯವಾದ ನಾಟಕದಿಂದ ಬೇಸತ್ತ ಗೌಡರು ಈ ಸಮಯದಲ್ಲಿ ಅವರಿಗೆ ಆತ್ಮ ವಿಕಾಸಕ್ಕೆ ಸಹಾಯಕಾರಿಯಾದವು. ತೆಲುಗು-ಕನ್ನಡ ಕಾವ್ಯಗಳನ್ನು ಜೋಳದರಾಶಿಯಲ್ಲಿಯೇ ಓದುವ ಅಭ್ಯಾಸವು ನಡೆಯಿತು. ಗೌಡರ ಮನೆಯ ಪಕ್ಕದವರಾದ ಕಲ್ಲನ ಗೌಡರು, ಗೌಡರ ತಾತನವರ ಕಾಲದಿಂದ ಗೌಡರ ಹಿತೈಷಿಗಳಾಗಿದ್ದು ಪ್ರತಿಯೊಂದು ಕಾರ್ಯದಲ್ಲಿಯೂ ಗೌಡರ ಕುಟುಂಬಕ್ಕೆ ನೆರವಾಗಿದ್ದರು. ಗ್ರಾಮದಲ್ಲಿ ನ್ಯಾಯ ಪಂಚಾಯಿತಿಗಳ ತೀರ್ಮಾನದಲ್ಲಿ, ಪ್ರಾಮಾಣಿಕತೆಯಲ್ಲಿ ಸಜ್ಜನರಾಗಿದ್ದುದಲ್ಲದೆ ಸಾಹಿತ್ಯಾಭಿಮಾನಿಗಳಾಗಿದ್ದರು. ರಾತ್ರಿ 10-11 ಗಂಟೆಗವರೆಗೂ ಪುರಾಣವಾಚನವಾಗುತ್ತಿತ್ತು. ಸಾಯಂಕಾಲ ಗುಡಿಯ ಮುಂದೆ ಕುಳಿತು ನೆರೆದ ಜನರಿಗೆ ಪುರಾಣಗಳನ್ನು ಓದುತ್ತಿದ್ದರು.

ಗೌಡರಿಗೆ ಶಾಲೆಯಲ್ಲಿ ಓದುತ್ತಿದ್ದಾಗ ಆಂಧ್ರಪ್ರದೇಶದ ಸುಪ್ರಸಿದ್ಧ ವಿಜಯನಗರ ಸುಬ್ರಹ್ಮಣ್ಯ ಶಾಸ್ತ್ರಿಗಳೆಂಬುವವರ ಪುರಾಣ ಕೇಳಿದ್ದೆ ಆಗ ಗೌಡರ ತಾತನವರು ಈ ಪುರಣ

ಕೇಳಲು ಊರವರೊಂದಿಗೆ ಗಡೇ ಕಲ್ಲಿಗೆ ಕರೆದುಕೊಂಡು ಹೋಗಿದ್ದರು. ಅಲ್ಲಿ ರಂಗನಾಥ ರಾಮಾಯಣವನ್ನು ಹೇಳುತ್ತಿದ್ದುದನ್ನು ಕೇಳಿ ಬೆರಗಾದೆ, ನಡುವಯಸ್ಸಿನ ಬಡಕಲು ಮೈಯ ಶಾಸ್ತ್ರಿಗಳು ಕೇವಲ ಶೃತಿಯ ಸಹಾಯದಿಂದ ಕಂಚಿನಂಥ ತಮ್ಮ ಕಂಠದಿಂದ ರಾಮಾಯಣವನ್ನು ಹೇಳುವುದಿಲ್ಲ ಆ ರಾಮಯಣವನ್ನು ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುತ್ತಿದ್ದರು. ಒಂದು ದಿನ ಗೌಡರ ತಾತ ಶಾಸ್ತ್ರಿಗಳಿಗೆ ಗೌಡರನ್ನು ತೋರಿಸಿ "ನಮ್ಮ ಹುಡುಗನು ಓದುತ್ತಾನೆ" ಎಂದರು. ಸಹೃದಯರಾದ ಶಾಸ್ತ್ರಿಗಳು "ಆಗಲಿ ಓದಲಿ ಬಾಪ್ಪ ಓದು" ಎಂದು ತಮ್ಮ ಪಕ್ಕಕ್ಕೆ ಗೌಡರನು ಕರೆದುಕೊಂಡು ರಂಗನಾಥ ರಾಮಾಯಣವನ್ನು ಕೈಗೆ ಕೊಟ್ಟರು. "ಇಲ್ಲಿಂದ ಓದು" ಎಂದು ಅಂದಿನ ಕಥಾ ಭಾಗ್ಯದ ಗುರುತನ್ನು ತೋರಿಸಿದರು, ಆ ಗ್ರಂಥವನ್ನೇ ನಾನು ನೋಡಿರಲಿಲ್ಲ, ಅದು ದ್ವಿಪದ ಕಾವ್ಯ, ಸರಾಗವಾಗಿ ಓದಿದೆ. ಬಹು ಪ್ರೀತಿಯಿಂದ ಗೌಡರ ತಲೆ ಸವರಿ ಕಕ್ಕುಲತೆಯ ಪ್ರೀತಿಯಿಂದ ಗೌಡರ ತಾತನ ಕಡೆ ನೋಡಿ "ಈ ನಿಮ್ಮ ಹುಡುಗ ಉತ್ತಮ ಓದುಗಾರನಾಗುತ್ತಾನೆ ನಾಲ್ಕಾರು ವರುಷ ನನ್ನ ಹತ್ತಿರ ಬಿಡುತ್ತೀರಾ" ಎಂದಿದ್ದರು. ಗೌಡರ ತಾತನಿಗೆ ಹಿಡಿಸಲಾರದ ಹಿಗ್ಗಾಯಿತು, ಅಲ್ಲದೆ ನಾಟಕಗಳನ್ನು ವಿಮರ್ಶೆ ಸಹ ಮಾಡುತ್ತಿದ್ದರು. ಇದಲ್ಲ ಶ್ರೀ ಚೆನ್ನಬಸವ ಸ್ವಾಮಿಗಳ ವಿಷಯವಾಗಿ ಲಾವಣಿಯನ್ನು ಬರೆದು ಪ್ರಿಂಟ್ ಮಾಡಿಸಿ ಬುಧಗವಿಯಲ್ಲಿ ಶ್ರಾವಣ ಪೂಜಾಮಹೋತ್ಸವದಲ್ಲಿರುವಾಗ ಹೋಗಿ ಅವರ ಶ್ರೀ ಚರಣ ಸನ್ನಿಧಿಯಲ್ಲಿ ಅವರ ಚರಿತ್ರೆಯ ಲಾವಣಿಯನ್ನು ಭಕ್ತಿಯಿಂದ ಅರ್ಪಿಸಿದೆ. 1937ರಲ್ಲಿ 'ಮಾಯಾಪ್ರಭಾವ' ಎಂಬ ಮೂರಂಕದ ನಾಟಕವನ್ನು ಬರೆಯಲಾಗಿತ್ತು, 1939ರಲ್ಲಿ ತುಕಾರಾಂ ನಾಟಕವು ರಚಿತವಾಯಿತು.

ಇಂತರ ದೈವಿಕ ಸನ್ನಿವೇಶಗಳು ಜೀವನದ ಮಾರ್ಗದರ್ಶಿಗಳಾದವು, ಇದರಿಂದ ಗೌಡರ ಬರವಣಿಗೆಯು ಒಂದು ಜಾಡನ್ನು ತುಳಿದು ಮುಂದುವರಿಯುವಂತಾಯಿತು. ವಾಸ್ತವ ಪ್ರಪಂಚಕ್ಕಿಂತ ಭಾವ ಪ್ರಪಂಚದಲ್ಲಿಯ ಮಗ್ನತೆಗಾಗಿ ಹಂಬಲಿಸುತ್ತಿದ್ದು ಆಗಾಗ ಭಾವಕ್ಕೆ ಹೊಳೆದವುಗಳು ಕವನಗಳಾಗಿ ಖಂಡಕಾವ್ಯಗಳಾಗಿ ನಾಟಕಗಳಾಗಿ ಹೊರಹೊಮ್ಮುತ್ತಿದ್ದವು.

ಒಂದು ಸಲ ವಾರದವರೆಗೂ ಒಂದೇ ಸಮನೆ ಬರೆಯಬೇಕಾಯಿತು. ಆ ಸ್ಫೂರ್ತಿಯೇ ಹಾಗಿತ್ತು. ಭಾಮಿನಿ ಷಟ್ಪದಿಯಲ್ಲಿ ಮೂರು ಸಂಧಿಗಳುಳ್ಳ "ದ್ಯೂತ

ಧರ್ಮರಹಸ್ಯ" ವೆಂಬ ಪ್ರಬಂಧ. ದ್ಯೂತವು ಒಂದು ಧರ್ಮ ಆ ಧರ್ಮ ರಹಸ್ಯವನ್ನು ಅರಿತು ಆಚರಿಸಿದವರಿಗೆ ಕೈಲಾಸವೆಂಬ ವಿಷಯ ಪ್ರತಿಪಾದನೆ ಈ ಕಾವ್ಯದಲ್ಲಿ ತರಲಾಗಿದೆ. ಮತ್ತು ಲಲಿತರಗಳೆಯಲ್ಲಿ "ಸಂಕ್ಷಿಪ್ತ ರಾಮಾಯಣ" ರಚನೆಯಾಗಿ ಇದೂ ಅಲ್ಲೆ ಸೇರಿತು. ಇದಾದ ತರುವಾಯ "ನಮ್ಮ ದಂತೆ" ಎಂಬ ಚಿಕ್ಕ ಖಂಡ ಕಾವ್ಯವು ಬರೆಯಲಾಯಿತು. ಈ ಕಾವ್ಯ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆಯುವಂತಾಯಿತು. ಕವಿ ಪಂಡಿತರಿಂದ ಪ್ರಶಂಸೆಯನ್ನು ಪಡೆಯಿತು. ಬಳ್ಳಾರಿಯ ನನ್ನೊಲವಿನ ಭಾಸ್ಕರಾಚಾರ್ಯ ರಾಮಚಂದ್ರ ಸ್ವಾಮಿಗಳ ತೆಲುಗು ಯಾತ್ರಿಕದಿಂದ ಕನ್ನಡಾನುವಾದದ 'ಯಾತ್ರಿಕನು ಸೇರಿ 'ನಮ್ಮ ಹಂಪೆ' ಅಚ್ಚಾಯಿತು, 'ಯಾತ್ರಿಕ'ನಲ್ಲಿಯ ವಿಷಯಗಳು ವಿಶ್ವ ವಿಚಾರಗಳು ಯಾವ ಪಂಥ ಯಾವ ಮತ, ಯಾವ ಜಾತಿಗೂ ಸೇರಿದವುಗಳಲ್ಲಿ.

**ಗಮಕದ ಗರಿಮೆ :** ಭಾರತ, ಸಿದ್ಧರಾಮ ಚಾರಿತ್ಯ, ಹರಿಶ್ಚಂದ್ರ ಕಾವ್ಯ, ಜೈಮಿನಿ ಭಾರತ, ಮುಂತಾದ ಕಾವ್ಯ ವಾಚನಗಳಿಂದ ಕನ್ನಡ ನಾಡಿಗೆ ಗಮಕಿಯಾಗಿ ಪರಿಚಯವಾಗುವ ಮುನ್ನ ಹರಪನಹಳ್ಳಿಯಲ್ಲಿ ನನ್ನ ಅಭಿಮಾನ ಸ್ನೇಹಿತರಿಂದ ಮೊದಲು ಪ್ರೋತ್ಸಾಹ ದೊರೆಯಿತು.

'ಗಮಕ' ಎಂದರೆ ಅದೊಂದು ಕಲೆಯೆಂದು ಅರಿತು ಕಲಿಯಲಿಲ್ಲ. ಸ್ವಾಭಾವಿಕವಾಗಿ ನಾನು ಬಾಲ್ಯದಿಂದಲೂ ಆತ್ಮಾನಂದಕ್ಕಾಗಿ ಅಭ್ಯಾಸ ಮಾಡಿ ಕಲಿತದ್ದೆ ಗಮಕವೆಂದು ಆ ಮೇಲೆ ಅರಿತೆ, ಅರಿತುದನ್ನು ಗೌಡ ಕಲಿತುದಕ್ಕೆ ಹೋಲಿಸಿ ನೋಡಿಕೊಂಡಾಗ ಗೌಡರು ಗಮಕಿಯಾಗಿದ್ದರು, ಗಮಕ ಶಿಕ್ಷಣದ ಕ್ರಮವನ್ನು ಆ ಗಮಕದ ಲಕ್ಷಣಗಳನ್ನು ವಿವರಿಸುವ ಸಾಹಿತ್ಯವು ನಮ್ಮಲ್ಲಿಲ್ಲವೆಂದು ಹೇಳಬಹುದು. ಗಮಕದಲ್ಲಿ ಷಟ್ಪದಿಗಳನ್ನು ತಾಳದಲ್ಲಿಯೂ ರಾಗದಲ್ಲಿಯೂ ಓದುವ ಬಳಕೆಯಿತ್ತು, ಅಲ್ಲದೆ ವಚನ ಕಾವ್ಯಗಳನ್ನು ರಾಗದಿಂದೋದುವ ಸಂಪ್ರದಾಯವು ಇತ್ತು, ನಾಲ್ಕು ದಶಕಗಳ ಹಿಂದೆ ಜೋಳದರಾಶಿಗಳಂತ ಹಳ್ಳಿಗಳಲ್ಲಿ ಈ ರೀತಿಯ ಕಾವ್ಯಗಳ ವಾಚನಕ್ಕೆ ಬಹಳ ಪ್ರೋತ್ಸಾಹವಿತ್ತು.

ಗಮಕವೆಂದರೆ ಆ ಕಾವ್ಯದ ಅರ್ಥ ವಿವರಣೆ, ಅವಶ್ಯಕತೆಯಿಲ್ಲದೆ ಅರ್ಥವಾಗುವಂತೆ ಓದುವುದೇ ಗಮಕ ಕಲೆಯ ವೈಶಿಷ್ಟವೆಂದು ಹೇಳಲಾಗುತ್ತದೆ. ಮತ್ತು ಆ ರೀತಿಯ ಅಭ್ಯಾಸವು ಆಗಿ ಇತ್ತೀಚಗೆ ಗಮಕಿಗಳ ಸಂಖ್ಯೆಯು ಬೆಳೆಯುತ್ತಿದೆ.

ಶ್ರಾವ್ಯ ಕಾವ್ಯಗಳಲ್ಲಿ ಷಟ್ಪದಿ ಕಾವ್ಯ, ಚಂಪೂ ಕಾವ್ಯಗಳೆಂದು, ಚಂಪು ಕಾವ್ಯಗಳೆಂದು ಎರಡು ವಿಧವಾಗಿ ವಿಂಗಡಿಸಿಕೊಂಡಾಗ ಹಾಡು ಗಬ್ಬಗಳಾದ ಷಟ್ಪದಿಗಳು ವಾಚನಕ್ಕೆ ಸುಲಭ, ಪ್ರಾರಂಭದಿಂದ ಮುಕ್ತಾಯದವರೆವಿಗೂ, ಭಾಮಿನಿಯೋ, ವಾರ್ಧಕವೋ ಇರುವುದರಿಂದ ಅದರ ಛಂದಸ್ಸು ಶೈಲಿಗಳು ಪ್ರಾರಂಭಕ್ಕೆ ಕೊಂಚ ಗಡುನಾಗಿದ್ದರೂ ಕಥೆ ಸಾಗಿದಂತೆಲ್ಲಾ ಅದು ಸರಳವೆನಿಸುವುದು. ಕಥೆಯ ವಿಸ್ತಾರಕ್ಕೆ ತಕ್ಕಂತೆ ಇದರಲ್ಲಿ ವಚನಗಳನ್ನು ಬಳಸಿಕೊಳ್ಳಲಾಗುತ್ತದೆ.' ಈ ವಚನಗಳ ಪದ-ವಾಕ್ಯಗಳ ಸಂಧಿಗಳನ್ನು ಬಿಡಿಸಿಕೊಂಡು ಓದುವುದು ಕೊಂಚ ಪ್ರಯಾಸವೇ. 4 ಈ ಕಾವ್ಯದ ಭಾಷೆ ಪ್ರೌಢವಾದುದು. ಕರ್ನಾಟಕದಲ್ಲಿ ಗೌಡರು ನಟನಾಗಿ ಸಂಚರಿಸಿದುದಕ್ಕಿಂತ ಗಮಕಿಯಾಗಿ ಸಂಚರಿಸಿದ್ದೇ ಹೆಚ್ಚು. ರಾಘವರ ಒಡನಾಟದಿಂದ ಆಂಧ್ರದೇಶದಲ್ಲಿ ಸುಮಾರು ಒಂದು ದಶಕದಷ್ಟು ನಾಟ್ಯ ಕಲಾಸೇವೆಯಲ್ಲಿ ತೊಡಗಿದ್ದರು. ಆಂಧ್ರರು ತಮ್ಮ ನಾಟಕಗಳಲ್ಲಿ ಪದಗಳಿಗಿಂತ ಪದ್ಯಗಳನ್ನೇ ಬಳಸುವುದು ಹೆಚ್ಚು, ಅವರು ಆ ಪದ್ಯಗಳಿಗಿಂತ ಪದ್ಯಗಳನ್ನು ಹೇಳುವ ವೈಖರಿಯು ಮನೋಹರವಾಗಿಯೂ ಸಾಹಿತ್ಯ ಪೋಷಕವಾಗಿಯೂ ಇರುತ್ತೇ ಕೆಲವು ಕಡೆ ಅವರ ಕಾವ್ಯಗಳು ಷಟ್ಪದಿಗಳಲ್ಲಿರದೆ, ಚಂಪೂಕಾವ್ಯಗಳೆ ಹೆಚ್ಚು, ಅವುಗಳಲ್ಲಿ ಪೋತನನ 'ಭಾಗವತ' 'ವಸು ಚರಿತ್ರೆ' ನನ್ನಯ್ಯನ ತಿಕ್ಕನ ಭಾರತ, ಶ್ರೀನಾಥನ 'ಹರವಿಲಾಸ' ಕಂಕಂಟ ಪಾಪರಾಜನ 'ಉತ್ತರ ರಾಮಾಯಣ, ಶತಾವಧಾನಿ ಗಡಿಯಾರಂ ವೇಂಕಟಶೇಷ ಶಾಸ್ತ್ರಿಗಳ 'ಶಿವಭಾರತ' ಇತ್ಯಾದಿ ಆಂಧ್ರ ಪುರಾಣ ಕಾವ್ಯಗಳನ್ನು ಗೌಡರ ಕನ್ನಡ ಕಾವ್ಯಗಳ ವ್ಯಾಸಂಗದೊಂದಿಗೆ ಚಿಕ್ಕಂದಿನಿಂದಲೂ ಓದುವ ಅಭ್ಯಾಸವುಂಟು.

ಆಂಧ್ರದ ಗಡಿನಾಡಿನ ಕೊನೆಯಂಚಿನ ಭಾಗದಲ್ಲಿ ಬೆಳೆದು ಬಂದ ಗೌಡರಿಗೆ ಆಂಧ್ರ-ಕರ್ನಾಟಕ ಸಾಹಿತ್ಯ ಪರಿಚಯುವಾದುದು ಸಹಜವೇ ಆಗಿದೆ. ಗೌಡರ ಪ್ರಾಥಮಿಕ ವಿದ್ಯಾಭ್ಯಾಸ ತೆಲುಗಿನಲ್ಲಿಯೇ ಆಯಿತು. ಇದರಿಂದ ಆಂಧ್ರ ಭಾಷಾ ಪರಿಚಯದಿಂದ ಮತ್ತು ಆಂಧ್ರರ

ಪರಿಯದಿಂದ ಆ ಭಾಷೆಯಲ್ಲಿಯ ಸೊಗಸು, ಶೈಲಿಗಳು ಗೌಡರ ಗಮಕಕ್ಕೆ ಸಹಾಯಾರಿಯಾದವು.

ಪೊದ್ದಟೂರಿಂದ ಶಪಾವಧಾನಿಗಳು ಬಂದರು, ಮತ್ತೆ ಅವರ ಮುಂದೆ "ನಮ್ಮ ಹಂಪೆ" ಓದಲಾಯಿತು ಮಾಸ್ತರರು ಹೇಳಿದಂತೆ ಅವರು ತುಂಬಿದ ಕೊಡದಂತೆ ಆ ಕಾವ್ಯ ರಸಾನಂದವನ್ನು ಮನಸಾರೆ ಸವಿದಿದ್ದರು. 1945 ಮೇ ಈ ಘಟನೆಯು ಗಮಕ ಕಲೆಯನ್ನು ಗೌಡರು ಕವಿತೆಯನ್ನು ಜೀವನದ ಸರ್ವಸ್ವವಾಗಿ ಪ್ರೀತಿಸುವಂತಾಯಿತು. ಕೆಲವು ದಿನಗಳ ತರುವಾಯ ಪೀಡಿತನಾಗಿ ಬಳ್ಳಾರಿ ಸೇರುವಂತಾಯಿತು. ಔಷಧೋಪಚಾರಗಳಿಂದ ಚೇತರಿಸಿಕೊಳ್ಳುತ್ತಿರುವಾಗ ರಾಘವರ ಬಂಗಲೆಗೆ ಸಮೀಪದಲ್ಲಿಯೇ ಇದ್ದುದರಿಂದ ಅವರ ಜೀವನ ಚರಿತ್ರೆ ಏಕೆ ಬರೆಯಬಾರದು? ಎಂಬ ಭಾವವು ಉಂಟಾಗಿ ಪ್ರತಿನಿತ್ಯ ಅವರೊಂದಿಗೆ ಇರುವ ವೇಳೆಯನ್ನು ಉಪಯೋಗಿಸಿಕೊಂಡು ಅವರನ್ನು ಕೇಳಿಕೇಳಿ ಬರೆಯಲು ಪ್ರಾರಂಬಸಿದರು. ಬರೆದದ್ದು ಅವರಿಗೆ ತೋರಿಸಿ ತಪ್ಪುಗಳನ್ನು ತಿದ್ದುಕೊಳ್ಳುತ್ತಿದ್ದರು ಮತ್ತು ಅದನ್ನು ಜಯ ಕರ್ನಾಟಕ'ದಲ್ಲಿ ಪ್ರಸಿದ್ಧ ಪಡಿಸುತ್ತಾ ಬಂದರು. ಗೌಡ ಅನಾರೋಗ್ಯವು ಈ ರೀತಿ ಗುರುಚರಿತ್ರೆಯ ಸೇವೆಗೆ ಉಪಯೋಗವಾಗುತ್ತಿದ್ದುದರಿಂದ ಔಷದದ ಅವಶ್ಯಕತೆಯಿಲ್ಲದೆ ಸಂಪೂರ್ಣ ಆರೋಗ್ಯ ಹೊಂದಿ ಊರಿಗೆ ಬರುವಂತಾಯಿತು.

ಬಸವಣ್ಣನ ನಾಟಕ ಬರೆಯುವಾಗಾನಿಂದ ವೀರಶೈವ ಸಾಹಿತ್ಯದ ವ್ಯಾಸಂಗದಲ್ಲಿ ತೊಡಗಿದ್ದರು. ಅದರ ನೆರವಿನಿಂದ ಒಂದೆರಡು ಸಲ, ಧಾರವಾಡದ ಆಕಾಶವಾಣಿಯಲ್ಲಿ, ಬಸವ ಜಯಂತಿಗಳಲ್ಲಿ ಭಾಗವಹಿಸಿ ಶರಣರ ಸಾಹಿತ್ಯದ ಬಗ್ಗೆ ಪ್ರವಚನಗಳನ್ನು ಮಾಡಿದ್ದರು. ಅಷ್ಟು ಹೊತ್ತಿಗೆ ಅಪೂರ್ವವಾದ ಶೂನ್ಯ ಸಂಪಾದನೆಯ ಅಭ್ಯಾಸಕ್ಕಿಳಿದಿದ್ದರು. ಶೂನ್ಯ ಸಂಪಾದನೆಯ ಪ್ರವಚನಗಳು ನಾಡಿನಲ್ಲಿ ನೂತನವಾಗಿದ್ದವು.

ಎಲ್ಲರೂ ಸೇರಿದ್ದಾಗ ವೀರಣ್ಣನವರು 'ತಮ್ಮಿಂದ ಹರಿಶ್ಚಂದ್ರ ಕಾವ್ಯ ಕೇಳಲು ಅಭಿಲಾಷೆಯಾಗಿದೆ. 10.30 ಕಾವ್ಯ ವಾಚನ ಪ್ರಾರಂಭಿಸಲಾಯಿತು. ನಾಟಕದವರೆಲ್ಲರೂ ಬಂದು ಕೂತರು ಆ ಕಾವ್ಯದಲ್ಲಿ ಹರಿಶ್ಚಂದ್ರ, ಚಂದ್ರಮತಿ, ಲೋಹಿತಾಶ್ವರ ಪಾತ್ರಗಳಿಂದ ನಿರೂಪಿಸಿದ್ದರು.

ನಿರೂಪಣೆಯು ಕಲೆ ರಸಾತ್ಮಕವಾದುದು, ಕರುಣಾರಸ ಸನ್ನಿವೇಶದಿಂದ ಸಾಗಿ-ಸಾಗಿ ಡರವಠತೆಯಲ್ಲಿ ವೇಳೆ ಯೆಷ್ಟಾಯಿತೆಂಬುದರ ಅರಿವಿಲ್ಲದೆ. ಮಂತ್ರ ಮುಗ್ದತೆಯಂತೆ, ಮಹಾಯೋಗಿಗಳ ನಿಶ್ಚಲ ತಪ್ಪಸ್ಸಿನಂತೆ, ಅನಿರ್ವಚನೀಯ ಆನಂದಾನುಭವದ ಕಾವ್ಯರಸಾವೇಶದಲ್ಲಿ ವಿಶ್ವೇಶ್ವರನ ಸಾಕ್ಷಾತ್ಕಾರದವರೆಗೂ ಸಾಗಿತು.

ಸಾಹಿತ್ಯ-ಗಮಕ ಕಲೆಗಳ ಸಹಾಯದಿಂದ, ಧಾರ್ಮಿಕ ರಂಗದಲ್ಲಿದ್ದು, ಧಾರವಾಡದ ಶ್ರೀ.ನಿ.ಪ್ರ.ಮೃತ್ಯುಂಜಯಸ್ವಾಮಿಗಳ ಅಪ್ಪಣೆಯಂತೆ ನಾಡಿನ ಶಿವಾನುಭವ ಸಂಘಗಳಲ್ಲಿ ಶೂನ್ಯ ಸಂಪಾದನೆ'ಯ ಪ್ರವಚನ ಕಾರನಾಗಿ ಸೇವೆ ಸಲ್ಲಿಸುವಂತಾಯಿತು. ಆ ಸೇವೆಯಿಂದ ಗೌಡರ ಜೀವನವು ನೆಮ್ಮದಿಯ ಜಾಡನ್ನು ಹಿಡಿಯುವಂತಾಯಿತು. ಬಳ್ಳಾರಿ, ಚೆಳ್ಳಗುರ್ಕಿ, ಜೋಳದರಾಶಿ, ಗಡೇಕಲ್ಲು ಗ್ರಾಮಗಳಲ್ಲಿ ನಡೆಯುತ್ತಿದದ ಶಿವಾನುಭವ ಸಂಘಗಳಲ್ಲಿ ಭಾಗವಹಿಸಿ ವಾರದಲ್ಲಿ ಮೂರು ನಾಲ್ಕು ದಿನಗಳು ಶರಣ ಧರ್ಮಾಮೃತ ವಚನಗಳ ಪ್ರವಚನದಿಂದ ಆನಂದಗೊಂಡರು, ಶ್ರೀ.ನಿ.ಪ್ರ. ಮೃತ್ಯುಂಜಯ ಸ್ವಾಮಿಗಳು ಶೂನ್ಯಸಂಪಾದನೆಯ ಕಾರ್ಯಕ್ರಮಗಳನ್ನು ಏರ್ಪಡಿಸಿ ಸಮಾಜದ ಶಿವಾನುಭವ ತತ್ವ ಪ್ರಸಾರದ ಕಡೆ, ಮೆತ್ತಗೆ ಗೌಡರ ಪ್ರವೃತ್ತಿಯನ್ನು ತಿರುಗಿಸಿದರು. ಈ ಧರ್ಮರಂಗದಲ್ಲಿ ಗೌಡರ ಪ್ರವಚನ ಪಾತ್ರ ಭಕ್ತಿಯಿಂದಲೂ, ಸಹಜ ಸರಳತೆಯಿಂದಲೂ ಸಾಗಿದ್ದಲ್ಲದೆ, ಆತ್ಮವಿಕಾಸಕ್ಕೊಂದು ನಂಬಿಕೆಯನ್ನು, ಮಾರ್ಗವನ್ನು ಕಲ್ಪಿಸಿತು. ಈ ಕಾರ್ಯರಂಗದಲ್ಲಿ ಹೆಚ್ಚಾಗಿ, ಪಂಡಿತ ವೈನಾಗೇಶ ಶಾಸ್ತ್ರಿಗಳು ತತ್ವಶಾಸ್ತ್ರದ ಅರಿವಿನ ನೆರವು ದೊರೆತುದರಿಂದ ಗಡುಚಾದ ಶೂನ್ಯಸಂಪಾದನೆಯ ಪ್ರವಚನವು ಸರಳವಾಯಿತು.

ಗಮಕಿಯಾಗ ಸುತ್ತಿದ ಕರ್ನಾಟಕದಲ್ಲಿ ಶಿವಾನುಭವ ಸಂಘದ ಪ್ರಚಾರಕನಾಗಿ, ಶೂನ್ಯ ಸಂಪಾದನೆಯ ಪ್ರವಚನಗರನಾಗಿ ಮೂರನೇ ಸಲ ಪ್ರವಾಸ ಮಾಡುವ ಭಾಗ್ಯವನ್ನು, ಮೃತ್ಯುಂಜಯ ಸ್ವಾಮಿಗಳು ಒದಗಿಸಿ ಕೊಟ್ಟರು. ಗೌಡರ ಪ್ರವಚನ ಶ್ರೀಗಳ ಸನ್ನಿಧಿಯಲ್ಲಿ, ಪಂಡಿತ ವೈ.ನಾಗೇಶ್ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ, ಭಕ್ತಿಮಯ ಕಲಾತ್ಮಕ ತತ್ವದ ಶೂನ್ಯ ಸಂಪಾದನೆಯ ಪ್ರವಚನಗಳು ಒಂದೇ ಸಮನೆ ಸಾಗಿದವು.

ಬಹುದಿನಗಳಿಂದ ಶೂನ್ಯ ಸಂಪಾದನೆಯಲ್ಲಿಯ ಕೆಲವು ಭಾಗಗಳನ್ನು ಧ್ವನಿಮುದ್ರಿಕೆಗಳಾಗಿ ತಯಾರಿಸುವ ಯತ್ನ ನಡೆದಿತ್ತು 'ಬಯಲಗಳಿಗೆ' ಎಂಬ ಗೌಡರ ಸಂಗ್ರಹ ಪ್ರಕಟವಾಗಿತ್ತು, ಈಗ ಉಳಿದ ಭಾಗಗಳು 'ಮಹಾದೇವಿ ಅಕ್ಕ' 'ಮೋಳಿಗೆಯ ಮಾರಯ್ಯ' 'ಆಯ್ದಕ್ಕಿ ಮಾರಯ್ಯ' 'ಕಲ್ಯಾಣಕ್ಕೆ ಪ್ರಭು ಆಗಮನ' ಈ ನಾಲ್ಕು ಸಂಪಾದನೆಗಳನ್ನು ಧ್ವನಿ ಮುದ್ರಿಕೆಗಳವಡುವಂತೆ ಸಿದ್ದಪಡಿಸಲಾಯಿತು.

ಬಾಲ್ಯದಲ್ಲಿ ಶಾಲೆಯಲ್ಲಿ ಮೊಟ್ಟ ಮೊದಲಿಗೆ ಕಲಿತ ತೆಲುಗು, ಗೌಡರ ಕನ್ನಡದೊಂದಿಗೆ ಕಾವ್ಯವಾಚನ-ಶಿವ ಶರಣರ ವಚನ ವಾಙ್ಮಯವನ್ನು ತೆಲುಗಿನಲ್ಲೇಕೆ ತರಬಾರದು? ಎಂಬುದು, ಬಹು ದಿನಗಳಿಂದಲೂ ಯೋಚಿಸುತ್ತಿದ್ದ ವಿಷಯವಾಗಿತ್ತು, ಶೂನ್ಯಸಂಪಾದನೆ, ಲಿಂಗಲೀಲಾವಿಲಾಸ ಚಾರಿತ್ರ್ಯ, ಷಟ್‌ಸ್ಥಲ ಬಸವಣ್ಣನವರ ವಚನಗಳು, ಎಂಬ ಗ್ರಂಥಗಳಲ್ಲಿ ಸುಲಭವಾಗಿ ತೆಲುಗಿಗೆ ಆಳವಡುವ ವಚನಗಳನ್ನು ಬರೆಯಲು ಪ್ರಾರಂಭಿಸಿ ಸುಮಾರು 150 ವಚನಗಳನ್ನು ಬರೆದರು.

ಕರ್ನಾಟಕ ವಿಶ್ವವಿದ್ಯಾಳಯದಲ್ಲಿ ಗೌಡರ ಕಾವ್ಯ ವಾಚನ ಕಾರ್ಯಕ್ರಮವಾದುದು ಇದೇ ಮೊದಲಾದರೂ, ಹಿಂದೆ ಎರಡುಸಲ ಇಲ್ಲಿಯ ಪದವೀದಾನ ಸಮಾರಂಭಗಳಿಗೆ ಬಂದಿದ್ದರು. ಒಂದು ಸಲ ಮೈಸೂರು ಮಹಾರಾಜರಿಂದ ನಡೆದಾಗ ಮತ್ತೊಂದು ಸಲ ರಾಷ್ಟ್ರಾಧ್ಯಕ್ಷ ಬಾಬುರಾಜೇಂದ್ರ ಪ್ರಸಾದರು ಬಂದಾಗ ಮೊದಲನೇ ಸಲ ಪ್ರಾರ್ಥನೆ ಮಾಡಲು ಬಂದಿದ್ದರು. ಎರಡನೇ ಸಲ ಡಿ.ಸಿ.ಪಾವಟೆ ಉಪಕುಲಪತಿಯವರ ಷಷ್ಟ್ಯಬ್ದ ಸಮಾರಂಭದಲ್ಲಿ, ಅವರ ಗುಣಗಾನ ಸಂಸ್ಕೃತ ಶ್ಲೋಕಗಳ ಪ್ರಶಸ್ತಿ ಕುಸುಮಾಂಜಲಿ ಹಾಡಲು ಬಂದಿದ್ದರು. ಕರ್ನಾಟಕವೆಂಬುದು ಬರಿಯ ಹೆಸರು, ಇಲ್ಲಿರುವುದೆಲ್ಲಾ ಆಂಗ್ಲ ಭಾಷೆಯ ಸಂಸ್ಕೃತಿ.

ಒಂದು ದಿನ ಸವದತ್ತಿಗೆ ಹೋಗಿ ಅಲ್ಲಿ ಸುತ್ತಮುತ್ತಲು ತೀರ್ಥ ಕ್ಷೇತ್ರಗಳನ್ನು ಸುತ್ತಿಕೊಂಡು ಬಂದ ತರುವಾಯ, ರಾತ್ರಿ ಕಾವ್ಯ ವಾಚನ-ವಚನ ಸಂಗೀತ ಇತ್ಯಾದಿ ಕಾರ್ಯಕ್ರಮಗಳು ನಡೆಸಿದರು.

ಗೌಡರು ದಿನಚರಿಯಲ್ಲಿ ಬರೆಯುವ ಅಭ್ಯಾಸ 1932 ರಿಂದ ಬಳಕೆಯಲ್ಲಿದ್ದುದರಿಂದ, ವಚನ ಶೈಲಿಯ ಜಾಡು ಹಿಡಿದು, ಜೀವನದ ಪರಮಾರ್ಥದ ಕಡೆ ಸಾಗಿ, ಅದೊಂದು ಸಾಹಿತ್ಯದ ನಿಲುವಿಗೆ ಬಂದಿತ್ತು. ಮೇಲಿನಿಂದ ಮತ್ತೊಮ್ಮೆ ಓದಿದ್ದರು ಹೌದು ಅದು ಒಂದು ವಚನವೇ ಆಗಿತ್ತು.

ಇತಿಯಿಲ್ಲ; ಮಿತಿಯಿಲ್ಲ; ಹಿಂದಿಲ್ಲ; ಹಿತವಿಲ್ಲ; ಹಲವರೊಂದಾಗಿ ವಂಚನೆಯಲೆನ್ನ ಕಾಡುತಿಹಯ್ಯ ಕೊಟ್ಟುದನುಕೊಂಡು ಕಳ್ಳರಾಗಿಪ್ಪತರ ನಾನೇನೆಂಬೆನಯ್ಯ ಸುಳ್ಳರಾಗಿಪ್ಪವರನೆಂತೆಂಬೆನಯ್ಯ ಹೆಗ್ಗಣವ ಬೈಚಿಟ್ಟು ಅಗ್ಗಳದ ಮನೆಯ ಕಟ್ಟಿದ ಎಗ್ಗನಂತಾಯಿತು ಎನ್ನ ಬಾಳು, ಕಲ್ಲಕಟ್ಟಿಕೊಂಡು ಕೊಳನದಾರಿದ ಹುಚ್ಚನಂತಾಯಿತು ಎನ್ನ ಬದುಕು ಕಳ್ಳ ಸುಳ್ಳರ ಮನೆಯೊಡೆಯನೆಂದೆನಿಸಿ ಸಿಗ್ಗಿಲ್ಲದೆ.

ಇನ್ನೆಷ್ಟು ದಿನ ಬದುಕಲಿ _ _ ಹೀಗೆ ಸಾಗಿದ ಸಾಹಿತ್ಯ ಸೋಜಿಗವೆನಿಸಿತು, ಅದರ ಕೊನೆಗೆ ನನ್ನಿಷ್ಟ ದೈವ 'ರಾಮೆಶ'ನ ಮುದ್ರಿಕೆ ಸೇರಿಸಿದೆ ಪೂರ್ಣವಾಯಿತು. ಗೌಡರ ಕವನ ಪ್ರತಿಭೆಯ ಪಕ್ಷಿಗರಿಗೆದರಿಯ ಒಂದರ ಹಿಂದೊಂದು ನೂರಾರು ವಚನಗಳು ಲೋಕವೃತ್ತ, ಧಾರ್ಮಿಕ ವಿಚಾರಗಳನ್ನೆತ್ತಿ ಬರೆಯುವಂತಾಯಿತು. ಕವಿಯ ಜೀವನ ವಿಚಿತ್ರ ಅವನ ಸುಖದ ಸಾಹಿತ್ಯಕ್ಕಿಂತ, ದುಃಖ ಸಂತಾಪಗಳಿಂದ ಪ್ರಚೋದಿತವಾದ ಸಾಹಿತ್ಯವೇ ಸುಂದರವಾದುದೆಂಬುದಕ್ಕೆ ಇಂದು ಗೌಡರೇ ಸಾಕ್ಷಿಯಾಗಿದ್ದಾರೆ. ದುಃಖವಾಗಿ ಬಂದದ್ದು ಸುಖವಾಗಿ, ಸಾಹಿತ್ಯ ರಂಗದಲ್ಲಿ ಆನಂದಗೊಳ್ಳುವ ವಚನಗಳಾದವು.

ಇಲ್ಲಿಯ ಜನಪದ ಸಾಹಿತ್ಯ ಸಮ್ಮೇಳನದಲ್ಲಿ ನೂರಾ ಅರವತ್ತೈದು ಮೈಲು ಕಾರಿನಲ್ಲಿ ಸಾಗಿಬಂದ ಗೌಡರು, ಜಾನಪದ ಸಾಹಿತಿಯಾಗಿಯೇನು ಬಂದಿರಲಿಲ್ಲ, ಗಮಕಿಯಾಗಿ ಪ್ರೌಢ ಕಾವ್ಯ ವಾಚನಕ್ಕಾಗಿ ಬಂದಿದ್ದರು. ಒಂದು ದಿನ "ಹರಿಶ್ಚಂದ್ರ ಕಾವ್ಯ"ವನ್ನು ಪ್ರಾರಂಭಿಸಿದರು. ಅದು ರಸವತ್ತಾದ ಮಹಾಕವಿಯ ಪ್ರಯೋಗಗಳಿಂದ ಭಾವರಸಯುಕ್ತವಾಗಿ ಗಮಕ ಪದ್ಧತಿಯಲ್ಲಿ ಹರಿಶ್ಚಂದ್ರ ಹೊಲೆಯರ ಸಂವಾದ ನಡೆಯುತ್ತಿರುವಾಗ ಮುಂದೆ ಕೂಡ ಹುಡುಗರು ಕಿಸಿಕಿಸಿ ಕಿರಿಕಿರಿ ಮಾಡಿದರು. ರಸಾವೇಶದಲ್ಲಿದ್ದ ಗೌಡರು ಕೆರಳಿ ಕೋಪ

ತಾಮ್ರಾಕ್ಷನಾಗಿ, ಓದುತ್ತಿದ್ದ ಆ ಕಾವ್ಯವನ್ನೇ ತಾಳ್ಮೆಗೆಟ್ಟು ಬೀಸಿ ಮುಂದಿನವರ ಮೇಲೆಸೆದರು, ಲಿಂಗಣ್ಣನವರು ಎಲ್ಲಿದ್ದರೇನೋ ಧಾವಿಸಿ ಬಂದರು. ಬಿದ್ದ ಪುಸ್ತಕವನ್ನು ಎತ್ತಿಕೊಟ್ಟು ವಿಕೋಪಕ್ಕೆ ಹೋದ ಸನ್ನಿವೇಶವನ್ನು ಸರಳಗೊಳಿಸಿ, ನೆಮ್ಮದಿಯಿಂದ ಮುಂದಿದ್ದ ಹುಡುಗರನ್ನು ದೂರ ಕೂಡಿಸಿ ಓಂದಿದ್ದ ಹಿರಿಯರನ್ನು ಮುಂದೆ ಕೂಡಿಸಿ, ಕಾವ್ಯ ವಾಚನಕ್ಕೆ ವ್ಯವಸ್ಥಿತವಾದ ಸಮಯವನ್ನು, ಸ್ಥಾನವನ್ನು ಕಲ್ಪಿಸಿಕೊಟ್ಟರು.

**ವಾಗ್ಗೇಯಕಾರ :-**

ಕಾವ್ಯ ರಚನೆ ಮಾಡಿರುವ ದೊಡ್ಡನಗೌಡರು ಒಂದು ಲೆಕ್ಕದಲ್ಲಿ ಕವಿಗಳು ಆದರೆ ಅವರು ಸಮಕಾಲೀನ ನವೋದಯದ ಕವಿಗಳಂತಲ್ಲ. ಅವರ ರಚನೆಗಳು ಕೇವಲ ಕವಿತೆಗಳಾಗಿ ರಚನೆಗೊಳ್ಳಲಿಲ್ಲ ಅವರು ರಚಿಸಿದ್ದು ಹಾಡುಗಳನ್ನು ಭಾವ ತೀವ್ರತೆ ಮತ್ತು ಗೇಯ ಗುಣಗಳಿರುವ ಭಾವಗೀತೆಯ ರಚನೆಯಲ್ಲಿ ಸಮಕಾಲೀನರು ತೊಡಗಿ ಕೊಂಡಿದ್ದಾಗ ಗೌಡರು ಭಾವಗೀತೆಗಳಿಗಿಂತ ಭಿನ್ನವಾದ ಧಾಟಿ ಪ್ರಧಾನವಾದ ಹಾಡುಗಳನ್ನು ಬರೆದರು. ಹೀಗಾಗಿ ಅವರು ಕೇವಲ ಕವಿಯಾಗಿರದೆ ವಾಗ್ಗೇಯ ಕಾರರಾಗಿದ್ದಾರೆ. ಸ್ವಂತರಚನೆಳಿಗೆ ತಾವೇ ರಾಗ ಸಂಯೋಜನೆ ಮಾಡಿ ಹಾಡುತ್ತಲೇ ಅವುಗಳನ್ನು ಅಭಿವ್ಯಕ್ತಿಗೊಳಿಸುವವರನ್ನು ವಾಗ್ಗೇಯಕಾರರೆಂದು ಕರೆಯಲಾಗುತ್ತದೆ. ಈ ಅರ್ಥದಲ್ಲಿ ದೊಡ್ಡನಗೌಡರು ಕನ್ನಡದ ಅಪರೂಪದ ವಾಗ್ಗೇಯಕಾರರು, ಗೌಡರು ತಮ್ಮ ಕಾವ್ಯ ರಚನಾಕ್ರಮವನ್ನು ಕುರಿತು "ನಾನು ಕವಿತೆ ಬರೆದು ಆ ಮೇಲೆ ಅವಕ್ಕೆ ಧಾಟಿ ಕೂಡ್ರಿಸುವುದಿಲ್ಲ, ಗೌಡರಲ್ಲಿ ಸಹಜವಾಗಿ ಮೂಡಿ ಬಂದ ಧಾಟಿಗಳು ಪಲ್ಲವಿಗಳು ಕವಿತೆ ಬರೆಯಲು ಒತ್ತಾಯಿಸುತ್ತವೆ. ಹೀಗಾಗಿ ಕವಿತೆ ಮತ್ತು ಕವಿತೆಯ ಭಾವಕ್ಕೆ ತಕ್ಕ ಧಾಟಿಗಳು ಏಕಕಾಲಕ್ಕೆ ಸ್ಪಷ್ಟ ಆಕಾರ ಪಡೆಯುತ್ತವೆ." ಎಂದು ಹೇಳಿದ್ದಾರೆ ಗೌಡರ ಪ್ರತಿಭೆಯಲ್ಲಿ ಕವಿತೆ ಮತ್ತು ಸಂಗೀತಗಳೆರಡಕ್ಕೂ ಸಮಾನ ಸ್ಥಾನವಿರುವುದರಿಂದ ಅವುಗಳ ಅವಿನಾಭವ ಸಂಬಂಧ ಮತ್ತು ಅದರ ಪರಿಣಾಮವಾಗಿ ಧಾಟಿಯೊಂದಿಗೆ ಕವಿತೆಯ ಉದ್ಭವ ಸಹಜವಾಗಿದೆ. ಗೌಡರು ತಮ್ಮ ರಚನೆಗಳನ್ನು ಹೆಚ್ಚಾಗಿ ಹಾಡುಗಳೆಂದು ಕರೆದುಕೊಂಡಿದ್ದಾರೆ. ಹಾಡುಗಳ ರಚನೆ ಅವರ ಪಾಲಿಗೆ ಅತ್ಯಂತ ಆನಂದದ ಘಳಿಗೆ, ಆ ಅಲೌಕಿಕ ಆನಂದವನ್ನು ಕುರಿತು "ಹಾಡುಗಳನ್ನು ಬರೆಯುವುದರಲ್ಲಿ ಜಗತ್ತನ್ನೇ ಮರೆಯಲಾಗಿದೆ" ಎಂದು ಹೇಳಿದ್ದಾರೆ. ಗೌಡರು ಸ್ವಯಂಭೂ ವಾಗ್ಗೇಯ ಕಾರ ಅವರ ಕಾವ್ಯ

ರಚನೆಗಳ ಮೇಲೆ ಪರಂಪರಾಗತ 'ಪದ' ಸಾಹಿತ್ಯದ ಪ್ರಭಾವವಿದೆ. ಪ್ರಾಚೀನ ಕಾವ್ಯಗಳ ಆಳವಾದ ಅಧ್ಯಯನ ಮತ್ತು ಸಾಹಿತ್ಯದ ಮನನಗಳಿಂದಾಗಿ ಗೌಡರು ಕವಿಯಾಗಿ ಅರಳಿದವರು. ಪದ ಸಾಹಿತ್ಯ ಅವರಿಗೆ ಧಾಟಿಗಳ ಮೂಲಕವೇ ದೊರೆತುದರಿಂದ ಅವರು ಧಾಟಿಯೊಂದಿಗೆ ಪದಗಳನ್ನು ರಚಿಸಲು ಪ್ರೇರಣೆಗೊಂಡರು. ಪದ ಸಾಹಿತ್ಯದ ಪರಂಪರೆಯ ಒಂದು ಭಾಗವಾಗಿ ತಮ್ಮನ್ನು ಗುರತಿಸಿಕೊಂಡು ದೊಡ್ಡನಗೌಡರು ಸಮಕಾಲಿನ ಕಾವ್ಯ ಪ್ರವೃತ್ತಿಯ ಕಡೆಗೆ ಗಮಕ ನೀಡಲಿಲ್ಲ, ಇದು ಅವರ ಮಿತಿ ಎಂದು ಹೇಳಬಹುದು. ಗೌಡರ ಬಹಳಷ್ಟು ಹಾಡುಗಳು ಭಜನಾ ಪರಂಪರೆಯಲ್ಲಿ ಸೇರಿಕೊಂಡಿವೆ. 'ಶಿವ ನಿನ್ನ ಪಾದವ ನಂಬಿದೆ' 'ಮನವೆಂಬ ಮಂಗವು ನನ್ನ ಮಾತು ಕೇಳದು' ಮೊದಲಾದ ಹಾಡುಗಳನ್ನು ತುಂಬಾ ಮೆಚ್ಚಿಕೊಂಡಿದ್ದರು.

ಶಿವಾನುಭವ ಪ್ರವಚನಗಳಲ್ಲಿ ದಿನ ದಿನಕ್ಕೆ ನನ್ನ ಆಸಕ್ತಿಯು ಬೆಳೆದು ಅದರಲ್ಲಿಯೆ ಹೆಚ್ಚು ಕಾಲ ವಿನಿಯೋಗವಾಗುತ್ತಿರುವುದರಿಂದ ಹೀಗಾಗಿರಬೇಕೆಂದು ಅನಿಸುತ್ತದೆ. ಮಾತಾಡುವ (ಪ್ರವಚನ) ಧೋರಣೆಯು ಬೆಳೆದಂತೆಲ್ಲ ಕವನ ಬರೆಯುವ ಭಾವೋದ್ರೇಕವು & ಕಲ್ಪನಾ ಶಕ್ತಿಯು ಕುಂಠಿತವಾಗಿದೆಯೆಂದು ತೋರುತ್ತದೆ.

'ನಮ್ಮ ಹಂಪೆ' ಎಂಬ ಚಿಕ್ಕ ಕಾವ್ಯ ಕೃತಿಯೊಂದಿಗೆ ದೊಡ್ಡನಗೌಡರು ಈ ಸಂಗ್ರದಲ್ಲಿ ಭಾಸ್ಕರಾಯ ರಾಮಚಂದ್ರ ಶಾಸ್ತ್ರಿಯವರ ಯಾತ್ರಿಕುಡು (ಯಾತ್ರಿಕ) ಮತ್ತು ವಿಶ್ವಗಾನ ತೆಲುಗು ಕವಿತೆಗಳ ಅನುವಾದಗಳನ್ನು ಸೇರಿಸಿದ್ದಾರೆ.

ವಚನ ಸಾಹಿತ್ಯ ನಿಷ್ಠಾವಂತ ಅಭ್ಯಾಸಗಳಾದ ದೊಡ್ಡನಗೌಡರು ವಚನ ರಚನೆಯ ಅಂತರಂಗವನ್ನರಿತಿದ್ದರು, ಆದರೆ ವಚನಗಳ ರಚನೆಯತ್ತ ಅವರು ಗಮನ ನೀಡಿರಲಿಲ್ಲ, ಗೌಡರ ಪ್ರಜ್ಞೆಯಲ್ಲಿ ನಿಧಿಗೊಂಡಿದ್ದ ವಚನ ಸಾಹಿತ್ಯದ ಸ್ವರೂಪಲಯ ವಿನ್ಯಾಸಗಳು ಅಭಿವ್ಯಕ್ತಿ ಮಾರ್ಗ ದೊರೆತಿದೊಡನೆ ಸುಲಲಿತವಾಗಿ ಹೊರಹೊಮ್ಮಿದವು. ಹೀಗಾಗಿ ಗೌಡರದು ನಿರಾಯಾಸ ವಚನ ರಚನಾಕ್ರಿಯೆ. ತಮ್ಮ ವಚನಗಳಿಗೆ ಶರಣರ ವಚನಗಳು ಮಾದರಿ ಮತ್ತು ಪ್ರೇರಣೆಯೆಂಬ ಅರಿವು ಗೌಡರಲ್ಲಿದೆ. ಹತ್ತು ಕಲಾವಧಿಯಲ್ಲಿ ಬರೆದ ಅವರ 220 ವಚನಗಳ ಸಂಗ್ರಹ ರಾಮೇಶ ವಚನಗಳು ಗಮನಾರ್ಹವಾಗಿವೆ.

ದೊಡ್ಡನಗೌಡರು ರಚಿಸಿದ ಇನ್ನೊಂದು ಕಾವ್ಯ ಪ್ರಕಾರವೆಂದರೆ ಲಾವಣಿಗಳು ಅವರು ಪಾರ್ಣಾವಧಿ ಲಾವಣಿಕಾರರಲ್ಲ ಸಾಂದರ್ಭಿಕವಾಗಿ ಲಾವಣಿ ಬರೆದವರು. ತಾತನ ಗೀತಾಂಜಲಿ ಗೌಡರು ರಚಿಸಿರುವ ಒಂದು ಹಾಡುಗಬ್ಬ ಹಾಗೂ ದ್ಯೂತಧರ್ಮ ರಹಸ್ಯ ಎಂಬ 72 ಭಾಮಿನಿಗಳ ಒಂದು ಖಂಡ ಕಾವ್ಯವನ್ನು ದೊಡ್ಡನಗೌಡರು ರಚಿಸಿದ್ದಾರೆ.ಬಾಲ್ಯದಿಂದ ಬೆಳೆದ ನಾಟಕ ಕೃತಿಗಳ ವಿಮರ್ಶಾ ಪ್ರವೃತ್ತಿಯನ್ನು ಬೆಳೆಸಿಕೊಂಡರು. ಕನ್ನಡ ತೆಲುಗು ನಾಟಕಗಳ ಅಧ್ಯಯನ ವಿಮರ್ಶೆಗಳು ಮಾಡುತ್ತಿದ್ದರು.

ನಾಟಕಗಳು ಮೂರು ಅನುವಾದ ನಾಟಕಗಳು 1) ತುಕಾರಾಂ, (1930 ಅಪ್ರಕಟಿತ) ಕನಕದಾಸ (1940) ಕ್ರಾಂತಿ ಪರುಷ ಬಸವಣ್ಣ ನಾಟಕ ರಚನೆ (1947) ದೊಡ್ಡನಗೌಡರ ಜೀವನದ ಒಂದು ಅಪೂರ್ವ ಸಾಧನೆ ಶಿವನಾಣೆ (1940) ತಿರು ನೀಲಕಂಠನ ಭಕ್ತಿ ಜೀವನವನ್ನು ಕುರಿತು ಬರೆದ ನಾಟಕ. ಚಿಕ್ಕವಯಸ್ಸಿನ ಬರೆದ ನಾಟಕ (1982) ಜಾಗೃತಿ ಒಂದು ಸಾಮಾಜಿಕ ನಾಟಕ, 'ಸಾಯದವನ ಸಮಾಧಿ' (1982) ಅನಾಥ ಕವಿಯೊಬ್ಬನ ಬದುಕಿನ ದುರಂತವನ್ನು ಚಿತ್ರಿಸುತ್ತ ಸಮಾಜದ ಕೃತಕ ನಡವಳಿಕೆಗಳನ್ನು ವಿಡಂಬಿಸುವ ನಾಟಕ, ನೋಡೋರ ನಾಟಕ (1982) ಇದು ಕೂಡ ಸಾಮಾಜಿಕ ವಿಡಂಬನೆಗೆ ಮೀಸಲಾದ ನಾಟಕ. 'ಅಭಯ' ದೊಡ್ಡನಗೌಡರ ಕೊನೆಯ ನಾಟಕ.

ಬಯಲಗಳಿಕೆಗಳಲ್ಲಿ ದೊಡ್ಡನಗೌಡರು ಶೂನ್ಯ ಸಂಪಾದನೆಯ ಪ್ರವಚನ ಪ್ರಾರಂಭನೆ ಅದನ್ನು ಜನ ಸಾಮಾನ್ಯರಿಗೆ ಪರಿಚಯಿಸಿದ್ದು ಒಂದು ಚಾರಿತ್ರಿಕ ಸಂಗತಿ. ಇದಲ್ಲದೆ ಜೀವನ ಚರಿತ್ರೆಗಳು ನಂದೇ ನಾನೋದಿದೆ, ಆತ್ಮಚರಿತ್ರೆ, ಡೈರಿಗಳು, ಹಾಗೂ ತೆಲುಗು ಕೃತಿಗಳು.

**ದೊಡ್ಡನಗೌಡರ ಕೃತಿಗಳು :–**

**ಕಾವ್ಯ :–**

- ನಮ್ಮ ಹಂಪೆ
- ರಸವರ್ಷ
- ದೇಶೀಯ ವಚನಗಳು–ಭಾಗ–ಒಂದು
- ದೇಶೀಯ ವಚನಗಳು–ಭಾಗ–ಎರಡು
- ದೇಶೀಯ ವಚನಗಳು–ಭಾಗ–ಮೂರು
- ಗೌಡತಿ ಬರಲಿಲ್ಲ
- ತಾತನ ಗೀತಾಂಜಲಿ
- ರಾಮೇಶ ವಚನಗಳು
- ಚೆನ್ನಬಸವ ಸ್ವಾಮಿಯಗಳ ಲಾವಣಿ
- ದ್ಯೂತ ಧರ್ಮ ರಹಸ್ಯ
- ಪುಷ್ಪರಾಜ ಪಟಾ ಟೋಪ (ಅಪ್ರಕಟಿತ)
- ಸಂಕ್ಷಿಪ್ತರಾಮಯಣ (ಅಪ್ರಕಟಿತ)
- ಜೋಳದರಾಶಿ ಕಾವ್ಯ

**ನಾಟಕ :–**

- ತುಕಾರಾಮ್ (ಅಪ್ರಕಟಿತ)
- ಕನಕದಾಸ
- ಕ್ರಾಂತಿ ಪುರುಷ ಬಸವಣ್ಣ
- ದೊಡ್ಡನಗೌಡರ ನಾಟಕಗಳು
  (ಮಾಯ ಪ್ರಭಾವ, ಶಿವನಾಣೆ, ಜಾಗೃತಿ)

- ಜೋಳದರಾಶಿಯವ ಮೂರು ನಾಟಕಗಳು

  (ನೋಡೋರ ನಾಟಕ, ಅಭಯ, ಸಾಯದವನ ಸಮಾಧಿ)

ತತ್ವ ವ್ಯಾಖ್ಯಾನ ;-

- ಬಯಲಗಳಿಕೆ-ಭಾಗ-ಒಂದು
- ಬಯಲಗಳಿಗೆ-ಭಾಗ-ಎರಡು
- ಬಯಲಗಳಿಕೆ ಬೆಳಗು

ಆತ್ಮಕಥನ :-

- ನಂದೇ ನಾನೋದಿದೆ ಪ್ರಥಮ ಮುದ್ರಣ (1979)
- ದ್ವಿತೀಯ ಮುದ್ರಣ (1968)

ವಿಚಾರ :-

- ನೀವೇನಂತೀರಿ?

ಜೀವನ ಚರಿತ್ರೆ :-

- ಚೆಳ್ಳಗುರ್ಕಿ ಎರ್ರಿತಾತ (ಮಕ್ಕಳಿಗಾಗಿ)
- ಶಿವಮಯ ಜೀವನ ಚರಿತ್ರೆ
- ನಾಟಕ ಕಲಾ ಪ್ರಪೂರ್ಣ ಟಿ.ರಾಘವರು
- ದಂಡಿತ ವೈ.ನಾಗೇಶ ಶಾಸ್ತ್ರಿಗಳು

ಸಂಪಾದನೆ :-

- ಶ್ರೀ ಮೃತ್ಯುಂಜಯ ಭಕ್ತಿ ಗೀತೆಗಳು
- ಕಲಾ

- ಚೆಳ್ಳಗುರ್ಕಿ ಎರ್ರಿತಾತನವರ ಭಕ್ತಿ ಗೀತೆಗಳು

**ತೆಲುಗು :-**

- ಅನುಭವಾಲು-ಜ್ಞಾಪಕಾಳು
- ವಚನಾಮೃತಮು
- ಗೇಯ ಗುಂಜಾರಮು
- ಶೂನ್ಯ ಸಂಪಾದನಮು

**ದೊಡ್ಡನ ಗೌಡರನ್ನು ಕುರಿತು :-**

- ಗಮಕ ಕಲಾನಿಧಿ (ಅಭಿನಂದನ ಗ್ರಂಥ) ಸರಿ-ಜಯಾ ರಾಜಶೇಖರ
- ಜೋಳದರಾಶಿ ದೊಡ್ಡನಗೌಡರು. ಸಮಗ್ರ ಅಧ್ಯಯನ (ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ) ಡಾ.ಶಂಭು ಬಳಿಗಾರ
- ಮುಪ್ಪುರಿ ಪ್ರತಿಭೆಯ ಸ್ವಯಂಭೂ ಜೋಳದರಾಶೀ ದೊಡ್ಡನಗೌಡ (ಸಂದರ್ಶನ-ಉದಯವಾಣಿ ದೀಪಾವಳಿ ಸಂಚಿಕೆ 1986) ಡಾ.ಬಸವರಾಜ ಮಲಶೇಟ್ಟಿ.

**3.3 – ರಂಗಭೂಮಿ**

**ಬಣ್ಣದ ಬದುಕು:**

ಕಾವ್ಯರಚನೆ, ನಾಟಕ, ಪ್ರವಚನ ಇವು ದೊಡ್ಡನಗೌಡರ ಪ್ರತಿಭೆಯ ಅಭಿವ್ಯಕ್ತಿಗೆ ಮಾಧ್ಯಮಗಳಾಗಿದ್ದವು. ಇವುಗಳಲ್ಲಿ ಗೌಡರು ಹೆಚ್ಚು ಒಲಿದದ್ದು ನಾಟಕಕ್ಕೆ. ತಮ್ಮ ಇಳಿವಯಸ್ಸಿನಲ್ಲಿ ತಮ್ಮ ಬದುಕನ್ನು ಸಿಂಹಾವಲೋಕನ ಕ್ರಮದಿಂದ ನೋಡುತ್ತಿದ್ದಾಗ ಈ ಮಾತು ಖಾತ್ರಿ ಅನಿಸಿತು. "ನಿನ್ನ ಜೀವನದ ಮುಖವಾವುದು? ಎಂದು ನನ್ನನ್ನು ನಾನೇ ಕೇಳಿಕೊಂಡೆ. 'ನಾಟಕ' ಎಂದಿತು ಒಳದನಿ" ಎಂದು ಹೇಳಿಕೊಂಡಿದ್ದಾರೆ (ಡೈರಿ 27-3-82). ಬಾಲ್ಯದಲ್ಲಿಯೇ ಬಣ್ಣದ ಬದುಕು ಅವರನ್ನು ಆಕರ್ಷಿಸಿತು.

ಮನೆ ಮತ್ತು ಊರುಗಳೆರಡೂ ದೊಡ್ಡನಗೌಡರ ನಾಟಕ ಅಭಿರುಚಿಗೆ ಪ್ರೋತ್ಸಾಹದಾಯಕ ವಾತಾವರಣ ಕಲ್ಪಿಸಿಕೊಟ್ಟವು. ತಾತಂದಿರು ಬಯಲಾಟ ನಟರು ಮತ್ತು ಪ್ರೋತ್ಸಾಹಕರು. ದೊಡ್ಡಹೊನನ್ನನಗೌಡರು ದ್ರೌಪದಿ, ಪಾರ್ವತಿ ಪಾತ್ರಗಳಿಗೆ, ಸಣ್ಣ ಹೊನ್ನನಗೌಡರು ದುಶ್ಯಾಶನ, ಕೀಚಕ, ದಕ್ಷಬ್ರಹ್ಮ ಪಾತ್ರಗಳಿಗೆ ಹೆಸರಾಗಿದ್ದರು. ದೊಡ್ಡನಗೌಡರಿಗೆ ತಿಳುವಳಿಕೆ ಬರುವಷ್ಟರಲ್ಲಿ ತಾತಂದಿರು ನಟನೆಯಿಂದ ನಿವೃತ್ತರಾಗಿದ್ದರೂ ಊರವರು ಅವರ ಪಾತ್ರಗಳ ಬಗ್ಗೆ ಮಾತಾಡಿ ಕೊಳ್ಳುತ್ತಿದ್ದರು. ಸಣ್ಣಹೊನ್ನನಗೌಡರು ಮೊಮ್ಮಗನ ಸುಪ್ತಪ್ರತಿಭೆಯ ವಿಕಾಸಕ್ಕೆ ಸೂಕ್ತ ಅವಕಾಶ ನೀಡಿದರು. ಅಂದು ಬಯಲಾಟ ಹಳ್ಳಿಗರ ಏಕೈಕ ಮನರಂಜನಾ ಮಾಧ್ಯಮವಾಗಿತ್ತು.

ಸಣ್ಣಹೊನ್ನನಗೌಡರು ಪರ ಊರಿಗೆ ಬಯಲಾಟನೋಡಲು ಹೋಗುವಾಗ ಜೊತೆಯಲ್ಲಿ ಮೊಮ್ಮಗನನ್ನೂ ಕರೆದೊಯ್ಯುತ್ತಿದ್ದರು. ಹಾಗೆ ಹೋಗುವುದರ ಒಂದು ಸಂಭ್ರಮದ ಆಚರಣೆಯಾಗಿರುತ್ತಿತ್ತು. ಪರ ಊರವರು ತಮ್ಮೂರಿಗೆ ಬಯಲಾಟ ನೋಡಲು ಬರಬೇಕೆಂದು ಆಮಂತ್ರಣ ನೀಡಿ ಹೋಗುತ್ತಿದ್ದರು. ಸಣ್ಣಹೊನ್ನನಗೌಡರು ಊರವರನ್ನೆಲ್ಲ ಹೊರಡಿಸಿಕೊಂಡು 8-10 ಬಂಡಿಗಳಲ್ಲಿ ಕುರಿತು ಬಯಲಾಟದ ವ್ಯವಸ್ಥಾಪರಿಗೆ ಹೇಳಿಕಳಿಸುತ್ತಿದ್ದರು. ಅವರು ಬಂದು ಕೊಂಬು ತಮಟೆ ಮೇಳಸಮೇತ ಇವರನ್ನು ಗೌರವದಿಂದ ಕರೆದೊಯ್ದು ಅಟ್ಟದ ಮುಂಭಾಗದಲ್ಲಿ ಕೂಡ್ರಿಸುತ್ತಿದ್ದರು.

'ಕನಕತಾರ'ದಲ್ಲಿ ಆರು ವರ್ಷದ ಬಾಲಕ ದೊಡ್ಡನಗೌಡರಿಗೆ ಒಂದು ಚಿಕ್ಕಪಾತ್ರವಿತ್ತು. ಅದರಲ್ಲಿ ಋಷ್ಯಾಶ್ರಮದ ದೃಶ್ಯ. ವಟುಗಳು ಸಾಲಾಗಿ ನಿಂತು 'ಪಾಲಿಸೈ ಪಾವನಾಂಗ ಗುರುವರ' ಎಂಬ ಹಾಡು ಹೇಳಬೇಕಿತ್ತು. ಗೌಡರಿಗೆ ಬಾಲ್ಯದಲ್ಲಿ 'ರ'ಕಾರ ಉಚ್ಚಾರ ಸರಿಯಾಗಿ ಬರುತ್ತಿರಲಿಲ್ಲ. 'ಗುರುವರ' ಅನ್ನುವುದರ ಬದಲಾಗಿ 'ಗುಲುವ' ಅನ್ನುತ್ತಿದ್ದರು.

ದೊಡ್ಡನಗೌಡರು 11 ವರ್ಷದವರಾಗಿದ್ದಾಗ ಊರವರು 'ಲವಕುಶ' ಬಯಲಾಟ ಪ್ರದರ್ಶನಕ್ಕೆ ಎತ್ತಿಕೊಂಡರು. ಇದು ಹೆಸರಿಗೆ ಬಯಲಾಟವಾದರೂ ಪ್ರದರ್ಶನದ ಶೈಲಿಯಲ್ಲಿ ಬಯಲಾಟ ನಾಟಕಗಳ ಮಿಶ್ರಣವಾಗಿತ್ತು.

ದೊಡ್ಡನಗೌಡರ ಶಾಲಾ ಜೀವನವು ಅವರ ಅಭಿನಯ ಪ್ರತಿಭೆಯ ವಿಕಾಸಕ್ಕೆ ಬಹಳಷ್ಟು ನೆರವು ನೀಡಿತು. ಶಿಕ್ಷಕ ಷಡಕ್ಷರಯ್ಯನವರು ಮಕ್ಕಳಿಗೆ ಧ್ರುವ, ಪ್ರಹ್ಲಾದ, ಸಿರಿಯಾಳ, ಕೊಳೂರು ಕೊಡಗೂಸು ಮುಂತಾದ ಚಿಕ್ಕನಾಟಕಗಳನ್ನು ಕಲಿಸಿ ಪ್ರದರ್ಶಿಸುತ್ತಿದ್ದರು. ನಡುನಡುವೆ ಹಾಡುಗಳಿರುತ್ತಿದ್ದವು. ಬಾಲಕ ದೊಡ್ಡನಗೌಡರಿಗೆ ಅಭಿನಯ ಮತ್ತು ಹಾಡುಗಳು ಹುಚ್ಚು ಹಿಡಿಸಿದ್ದವು. ಊರವರ ಮೆಚ್ಚುಗೆ ಪಡೆದ ಈ ಮಕ್ಕಳನಾಟಕ ತಂಡ ಬಳ್ಳಾರಿಗೆ ಹೋಗಿ ಪ್ರದರ್ಶನ ನೀಡಿ ಬಂದಿತ್ತು.

ತರುಣ ದೊಡ್ಡನಗೌಡರು ಜವಾಬ್ದಾರಿಯಿಂದ ಆಡಿದ ಮೊದಲ ನಾಟಕ "ಗರುಡ ಗರ್ವಭಂಗ" ನಾಟಕದ ಹುಚ್ಚನ್ನು ಪೂರಾ ತಲೆಗೆ ಹಚ್ಚಿಕೊಂಡಿದ್ದ ಗೌಡರು ಊರಿನ ಆಸಕ್ತನಟರನ್ನು ಸೇರಿಸಿಕೊಂಡು 'ಗಡುಡಗರ್ವಭಂಗ' ಪ್ರಾಕ್ಟೀಸು ಪ್ರಾರಂಭಿಸಿದರು. ಆದರೆ ಇದು 'ಗೌಡಗರ್ವಭಂಗ' ವಾಯಿತು.



'ಗರಡು ಗರ್ವಭಂಗ' ಜೋಳದರಾಶಿಯವರಿಗೆ ಸುತ್ತು ಮುತ್ತಲಿನ ಹಳ್ಳಿಗರಿಗೆ ಒಂದು ಸ್ಮರಣೀಯ ಅನುಭವ ನೀಡಿತು. ಅದು ಆ ಭಾಗದಲ್ಲಿ ಪೂರ್ಣಪ್ರಮಾಣದ ಪ್ರಥಮ ನಾಟಕ. ಜನರಿಗೆ ಅದು ಹೊಸದು. ಬಹಳಷ್ಟು ಪ್ರಚಾರ ಮಾಡಿದ್ದರು. ವಿಪರೀತ ಜನಸಂದಣಿ. ಟಿಕೆಟ್ ಇಡುವ ನಿರ್ಧಾರವನ್ನು ಗೌಡರ ತಂದೆ ವಿರೋಧಿಸಿದರು. "ಜೋಳದರಾಶಿಯವರು ಹಣ ಇಸಿದುಕೊಂಡು ನಾಟಕ ತೋರಿಸಿದರು, ಅಂದರೆ ನಮ್ಮ ಮರ್ಯಾದೆ ಉಳಿದೀತೇ?" ಎಂಬುದು ಅವರ ಅಭಿಪ್ರಾಯ.

ದೊಡ್ಡನಗೌಡರ ಕೃಷ್ಣನ ಪಾತ್ರಕ್ಕೆ ಮದ್ರಾಸಿನಿಂದ ವಿಶೇಷ ಬಣ್ಣ-ವೇಷಭೂಷಣಗಳನ್ನು ತರಿಸಿದ್ದರ ಸುದ್ದಿಯಾಗಿ ಜನರಲ್ಲಿ ಕುತೂಹಲ ಮೂಡಿತ್ತು. ರಾತ್ರಿ 10 ಗಂಟೆಗೆ ಪ್ರಾರಂಭವಾದ ನಾಟಕ ಬೆಳಗಾಗುವರೆಗೆ ನಡೆಯಿತು. ಸೇವಕನಿಗೆ ಮೊದಲು ಮಾಡಿ ಎಲ್ಲ ಪಾತ್ರಗಳಿಗೂ ಹಾಡುಗಳಿದ್ದವು. ಮೂರು ವರ್ಷಗಳಿಂದ ಅನಿಷ್ಟ ನಾಟಕವೆಂಬ ಅಪವಾದಕ್ಕೆ ಗುರಿಯಾಗಿದ್ದ 'ಗರುಡ ಗರ್ವ ಭಂಗ' ಯಾವುದೇ ವಿಘ್ನಗಳಿಲ್ಲದೆ ಯಶಸ್ವಿಯಾಗಿ ಪ್ರದರ್ಶನಗೊಂಡು ಜನಮೆಚ್ಚುಗೆ ಪಡೆದುದಕ್ಕಾಗಿ ಗೌಡರಿಗೆ ತೃಪ್ತಿ-ಹೆಮ್ಮೆ-ಸಂತಸ. ಆ ಪ್ರಯೋಗ ಕುರಿತು "ನಮ್ಮ

ನಾಟಕ ನಮಗೇ ದಂಗುಬಡಿಯು ವಂತಾಯಿತು. ಪ್ರವೇಶಗಳು ಒಂದಕ್ಕಿಂತ ಒಂದು ರಂಜನೆಯಾಗಿ ನಡೆದುಕೊಂಡು ಹೋಗುತ್ತಿರುವಾಗ ನಮಗರಿವಿಲ್ಲದೇ ಸೂರ್ಯೋದಯವಾಗಿತ್ತು." ಎಂದು ಹೇಳಿದ್ದಾರೆ.

ಜೋಳದರಾಶಿಯಲ್ಲಿ "ಸರ್ವಜನ ಮನೋರಂಜನ ಕರ್ನಾಟಕ ನಾಟಕ ಸಭಾ" ಸ್ಥಾಪನೆಯಾಯಿತು (1928) ಮೊದಲು ಗುಂತಕಲ್ಲದಲ್ಲಿ ಎರಡು ನಾಟಕಗಳನ್ನಾಡಿದರು. 150 ರೂ. ನಷ್ಟವಾಯಿತು. ಜೋಳದರಾಶಿ ಕಂಪನಿಯಲ್ಲಿ ದೊಡ್ಡನಗೌಡ ಎಂಬ ಹುಡುಗ ಚೆನ್ನಾಗಿ ಪಾತ್ರಮಾಡುತ್ತಾನೆಂಬ ಸುದ್ದಿ ಎಲ್ಲೆಡೆ ಹರಡಿತು. ಬಳ್ಳಾರಿಯ ಕೆಲವು ನಾಟಕಾಭಿಮಾನಿಗಳು ದೊಡ್ಡನಗೌಡರನ್ನು ಮಾತಾಡಿಸಿ ಗೆಳೆತನ ಮಾಡಿಕೊಂಡದ್ದರಿಂದ ಅವರ ಹೆಸರು ಬಳ್ಳಾರಿಯ ನಾಟಕ ವಲಯದಲ್ಲಿ ಕೇಳಿ ಬರತೊಡಗಿತು.

ರಾಘವರಿಂದ ಮೆಚ್ಚುಗೆ ಶುಭಾಶಯಗಳನ್ನು ಪಡೆದುಕೊಂಡು ಧನ್ಯತಾಭಾವದಿಂದ ಹೊರಗೆ ಬರುತ್ತಿದ್ದಾಗ ಬಾಗಿಲು ಮರೆಯ ಕತ್ತಲಲ್ಲಿ ಕುಳಿತಿದ್ದ ಕೈಲಾಸಂ ಗೌಡರ ಕೈಹಿಡಿದು "ಗೌಡ್ರೇ ನೀವು ದೊಡ್ಡಯಾಕ್ಟ್ರು" ಅಂದರು. ಗೌಡರಿಗೆ ರೋಮಾಂಚನವಾಯಿತು. ಇಂಥ ದೊಡ್ಡಮನುಷ್ಯ ತಮ್ಮ ಪಾತ್ರಾಭಿನಯವನ್ನು ಮರೆಯಲ್ಲಿ ಕುಳಿತು ನೋಡಿದ್ದಾರಲ್ಲಾ ಎಂಬ ಸಂತೋಷದೊಂದಿಗೆ ಸಂಕೋಚವೂ ಅನಿಸಿತು. ತಡಬಡಿಸುತ್ತ "ಸಾರ್, ನನಗೇನು ಗೊತ್ತು? ನಾನೊಬ್ಬಹಳ್ಳಿ ಮುಕ್ಕ" ಅಂದರು. ಅದಕ್ಕೆ ಕೈಲಾಸಂ "ಅದಕ್ಕೇ ನಿಮ್ಮ ಯೋಗ್ಯತೆ ನಿಮಗೆ ಗೊತ್ತಿಲ್ಲ. ನಿಜವಾಗಿಯೂ ನೀವು ದೊಡ್ಡಯಾಕ್ಟ್ರು" ಎಂದು ಹೇಳಿ ಬೆನ್ನು ಚಪ್ಪರಿಸಿದರು. ಕೈಲಾಸಂ ಬರೀ ಉಪಚಾರಕ್ಕೆ ಆ ಮಾತು ಹೇಳಿರಲಿಲ್ಲ. ಆ ಹಳ್ಳಿಯ ತರುಣನಲ್ಲಡಗಿರುವ ಅದ್ಭುತ ಪ್ರತಿಭೆ ಅವರ ದಿವ್ಯದೃಷ್ಟಿಗೆ ಗೋಚರಿಸಿತ್ತು. ಭವಿಷ್ಯದಲ್ಲಿ ಅವರ ಮಾತು ನಿಜವಾಯಿತು. ಕನ್ನಡ ರಂಗಪ್ರಪಂಚ ಒಬ್ಬ ಅಭಿಜಾತ ನಟನನ್ನು ಪಡೆದುಕೊಂಡದ್ದು ಇತಿಹಾಸವಾಯಿತು. ಕೈಲಾಸಂ ದೊಡ್ಡನಗೌಡರನ್ನು ಮರೆತಿರಲಿಲ್ಲ. ಮುಂದೆ ಕೈಲಾಸಂ ಅವರ ಅಧ್ಯಕ್ಷತೆಯಲ್ಲಿ ಮದ್ರಾಸಿನಲ್ಲಿ 29ನೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. (ಡಿಸೆಂಬರ್ 1945) ದೊಡ್ಡನಗೌಡರು 'ಯಾತ್ರಿಕ' ಕವನಗಳನ್ನು ಹಾಡಿದರು. ಕೈಲಾಸಂ ಅಧ್ಯಕ್ಷ ಪೀಠದಿಂದ

ಎದ್ದು ಬಂದು ಆನಂದ ಬಾಷ್ಪಗಳನ್ನು ಸುರಿಸುತ್ತ ಗೌಡರನ್ನು ಬಿದಪ್ಪಿಕೊಂಡು "ಗೌಡ್ರೇ ನೀವು ಕೃತಾರ್ಥರು" ಅಂದರು.

ಜೋಳದರಾಶಿಯಿಂದ ಬಳ್ಳಾರಿ ರಂಗಮಂಚಕ್ಕೆ ಬಂದ ದೊಡ್ಡನಗೌಡರು ಬಳ್ಳಾರಿ ರಾಘವರ ಮಂಡಳಿ ಪ್ರವೇಶಿಸಲು ತಡವಾಗಲಿಲ್ಲ, ಗೌಡರ ಅಭಿನಯವನ್ನು ತುಂಬಾ ಮೆಚ್ಚಿಕೊಂಡಿದ್ದ ರಾಘವರು ಅವರನ್ನು ತಮ್ಮ 'ಬಳ್ಳಾರಿ ಆರ್ಟ ಲೀಗ್'ಗೆ ಆಹ್ವಾನಿಸಿದರು. ರಾಘವರು ಜೋಳದರಾಶಿಗೆ ಬಂದು ಪಂಪನಗೌಡರಿಗೆ ವಿನಂತಿ ಮಾಡಿಕೊಂಡರು. "ಗೌಡ್ರೇ, ಮುಂದಕ್ಕೆ ಬರುವ ಮಗನನ್ನು ತಡೆಯಬೇಡಿರಿ. ನನ್ನ ಮಗನಂತೆ ಕಾಳಜಿಯಿಂದ ನೋಡಿಕೊಳ್ಳುತ್ತೇನೆ" ಎಂದು ಭರವಸೆಕೊಟ್ಟು ಪಂಪನಗೌಡರನ್ನು ಒಪ್ಪಿಸಿದರು.

ರಾಘವರಿಗೆ ದೊಡ್ಡನಗೌಡರ ಮೇಲೆ ವಿಶೇಷ ಪ್ರೀತಿ, ಅಭಿಮಾನ. ಗೌಡರ ಅಭಿನಯ ಕಲೆಗೆ ಅವರು ಮನಸೋತಿದ್ದರು. ರಾಘವರ ಮನೋಭಾವಕ್ಕೆ ತಕ್ಕಂತೆ ಅವರ ನಿರ್ದೇಶನದ ಸೂತ್ರಗಳನ್ನೆಲ್ಲ ಮೈಗೂಡಿಸಿಕೊಂಡು ತನ್ಮಯತೆಯಿಂದ ಪಾತ್ರಗಳನ್ನು ಅಭಿನಯಿಸುತ್ತಿದ್ದ ದೊಡ್ಡನಗೌಡರು ರಾಘವರ ಅಚ್ಚುಮೆಚ್ಚಿನ ಶಿಷ್ಯರಾದುದರಲ್ಲಿ ಅಚ್ಚರಿ ಇಲ್ಲ. 1935 ರಿಂದ ರಾಘವರ ಅಂತ್ಯದ ವರೆಗೆ (1946) ಅವರ ಮಂಡಳಿಯ ಪ್ರಮುಖ ನಟರಾಗಿ ದೊಡ್ಡನಗೌಡರು ಆಂಧ್ರ ಕರ್ನಾಟಕಗಳಲ್ಲಿ ಹೆಸರು ಮಾಡಿದರು. ರಾಮದಾಸ್, ಸಾರಂಗಧರ, ಭಕ್ತ ಮಾರ್ಕಂಡೇಯ, ಚಾಣಿಕ್ಯ, ಪ್ರಹ್ಲಾದ, ಪಾದುಕಾ ಪಟ್ಟಾಭಿಷೇಕ ಮುಂತಾದವು ರಾಘವರ ನಾಟಕಗಳು. ಇವುಗಳಲ್ಲಿ ಗೌಡರು ಕಬೀರ್, ರಾಮ, ನಾರದ, ಸುಬುದ್ಧಿ, ಚಂದ್ರಗುಪ್ತ ಮೊದಲಾದ ಪಾತ್ರಗಳನ್ನು ಮಾಡುತ್ತಿದ್ದರು. ರಾಘವರ ಖಾಸಾ ಪ್ರೀತಿಯ ನಾಟಕವೆಂದರೆ ರಾಮದಾಸ್. ಇದರಲ್ಲಿ ರಾಘವರು ರಾಮದಾಸ್ ದೊಡ್ಡನಗೌಡರು ಕಬೀರ್. ಈ ನಾಟಕ ಆಂಧ್ರದ ತುಂಬ ಬಹಳ ಜನಪ್ರೀಯವಾಯಿತು. ದೊಡ್ಡನಗೌಡರ ಕಭೀರ್ ಪಾತ್ರದ ಅಭಿನಯವನ್ನು ತುಂಬಾ ಮೆಚ್ಚಿಕೊಂಡು ಆಂಧ್ರರು ಅವರನ್ನು 'ಕಬೀರಗೌಡ' ಎಂದು ಕರೆಯಲಾರಂಭಿಸಿದರು.

"ನಾಟಕದಲ್ಲಿದ್ದದ್ದನ್ನೇ ಆಡಬೇಕೇನ್ರಿ? ಸುಮ್ಮನೇ ಸ್ಟೇಜಿನ ಮೇಲೆ ಬನ್ನಿ" ಎಂದು ಹೇಳಿ ಗೌಡರ ಪ್ರತಿಕ್ರಿಯೆಗೆ ಕಾಯದೆ ಆ ಕಡೆಯ ಸೈಡ್‌ವಿಂಗ್ಸ್‌ನಲ್ಲಿ ಹೋಗಿ ನಿಂತರು. ನಡೆದಿದ್ದ ದೃಶ್ಯಮುಗಿದು ನಟರು ಒಳಗೆ ಬಂದಕೂಡಲೇ ರಾಘವರು ದೊಡ್ಡನಗೌಡರಿಗೆ ಸ್ಟೇಜಿನ ಮೇಲೆ ಬರಲು ಒಂದೇ ಸವನೆ ಸನ್ನೆ ಮಾಡತೊಡಗಿದರು. ನಾರದ ವೇಷಧಾರಿ ಗೌಡರು ಭಂಡ ಧೈರ್ಯದಿಂದ ಒಂದು ದೇವರ ನಾಮ ಹಾಡುತ್ತ ಸ್ಟೇಜಿಗೆ ಬಂದರು. ಆ ಕಡೆಯಿಂದ ಮಾಯಾಬ್ರಾಹ್ಮಣ ಪಾತ್ರದಲ್ಲಿ ರಾಘವರು ಬಂದರು. ಸುಮಾರು ಐದು ನಿಮಿಷ ಇಬ್ಬರಲ್ಲಿ ಆಶುಸಂಭಾಷಣೆ ನಿರರ್ಗಳವಾಗಿ ಸೊಗಸಾಗಿ ಸಾಗಿತ್ತು. ಪ್ರೇಕ್ಷಕರು ಇದು ಮೂಲ ನಾಟಕದ್ದೇ ಒಂದು ದೃಶ್ಯವೆಂದು ನಂಬಿದರು. ಒಳಗೆ ಬಂದಕೂಡಲೆ ರಾಘವರು ಗೌಡರನ್ನು ಅಪ್ಪಿಕೊಂಡು "ನೀವು ಪರೀಕ್ಷೆಯಲ್ಲಿ ಗೆದ್ದಿರಿ. ನಟನಿಗಿರಬೇಕಾದ ಸಮಯ ಸ್ಫೂರ್ತಿ ಕಲ್ಪನಾ ಶಕ್ತಿಗಳು ನಿಮ್ಮಲ್ಲಿದ್ದುದನ್ನು ಕಂಡು ಬಹಳ ಸಂತೋಷವಾಯಿತು. ಶಿವನು ನಿಮ್ಮನ್ನು ಕಾಪಾಡಲಿ" ಎಂದು ಹರಸಿದರು.

ಜಿಲ್ಲಾ ಕಲೆಕ್ಟರ್ (ಅವರು ರಾಘವರ ಗೆಳೆಯರು) ನಾಟಕ ನೋಡಲು ಬಂದಿದ್ದರು. ಅವರು ನಾಟಕಕ್ಕೆ ಸಂಗೀತ ಇರಲೇಬಾರದೆಂಬ ಪಂಥವದರು. ನಾಟಕ ಮುಗಿದ ಮೇಲೆ "ಈ ಕಬೀರ (ದೊಡ್ಡನಗೌಡರು) ನನ್ನ ಅಭಿಪ್ರಾಯ ಬದಲಿಸಿದರು. ನಾಟಕದಲ್ಲಿ ಸಂಗೀತ ಇರುವುದಾದರೆ ಹೀಗಿರಲಿ" ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಗೌಡರು ನಾಟಕದಿಂದ ಗಳಿಸಿದವರಲ್ಲ. ಗಳಿಸುವ ಯೋಚನೆ ಅವರಿಗೆ ಬರಲು ಸಾಧ್ಯವೂ ಇರಲಿಲ್ಲ. ಸ್ವಸಂತೋಷಕ್ಕಾಗಿ ನಾಟಕದ ತಿರುಗಾಟ. ಕೈಯಿಂದ ಖರ್ಚುಮಾಡಿಕೊಂಡು ತಿರುಗಾಡುತ್ತಿದ್ದರು. ನಾಟಕದ ಪ್ರಾಕ್ಟೀಸಿಗೆ ನಿತ್ಯ ಬಳ್ಳಾರಿಗೆ ಹೋಗಿ ಬರುವುದು ನಡೆದೇ ಇತ್ತು. ಇದು ದೊಡ್ಡನಗೌಡರ ತಂದೆ ಪಂಪನಗೌಡರಿಗೆ ಸರಿಬರಲಿಲ್ಲ. ಅವರ ದೃಷ್ಟಿಯಲ್ಲಿ ಇದು ಕೆಲಸಗೇಡಿಗಳು ಮಾಡಬೇಕಾದುದು. ಮತ್ತು ಅನವಶ್ಯಕವಾದ ದುಂದುವೆಚ್ಚ. ಹೀಗೆ ಲಂಗುಲಗಾಮಿಲ್ಲದೆ ಖರ್ಚು ಮಾಡುತ್ತ ತಿರುಗಾಡಿದರೆ ಮನೆತನ ಹೇಗೆ ಉಳಿದೀತು ಎಂಬ ಉಪಾಯ ಕಂಡುಕೊಂಡರು. ಅದೇನೆಂದರೆ ಗೌಡರಿಗೆ ಖರ್ಚಿಗೆ ಹಣ ಕೊಡುವುದನ್ನು ನಿಲ್ಲಿಸಿದರು. ಹಾಗೆ ನೋಡಿದರೆ ಮಗ ದೊಡ್ಡನಗೌಡ ಈ ದೊಡ್ಡಮನೆಯ

ಹಕ್ಕುದಾರ. "ಅವನ ಆಸ್ತಿ ಅವನ ಆದಾಯ ಅವನ ಖರ್ಚು. ತಾನೇಕೆ ನಡುವೆ ಮೂಗು ತೂರಿಸಬೇಕು?" ಎಂಬ ಎಚ್ಚರ ಅವರಲ್ಲಿದ್ದರೂ ಮನೆತನದ ಸಂರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ಅವರು ಈ ವಿಷಯವಾಗಿ ನಿಷ್ಠುರವಾಗಿ ನಡೆದುಕೊಳ್ಳಬೇಕಾಯಿತು. ತಾವು ಹಣಕೊಡುವುದನ್ನು ನಿಲ್ಲಿಸಿದ್ದಲ್ಲದೆ ಊರಲ್ಲಿ ಯಾರೂ ಉದ್ರಿ–ಸಾಲ ಕೊಡಕೂಡದೆಂದು ಕಟ್ಟಪ್ಪಣೆ ಮಾಡಿದರು. ಗೌಡರಿಗೆ ಪೀಕಲಾಟಕ್ಕಿಟ್ಟುಗೊಂಡಿತ್ತು. ಹೊನ್ನಪ್ಪ ಎಂಬವರು ವಿಶ್ವಾಸದಿಂದ ಗುಟ್ಟಾಗಿ ಆಗ ಗೌಡರಿಗೆ ಕೈಗಡ ಸಾಲ ಕೊಡುತ್ತಿದ್ದರು. ನಾಗಮ್ಮಜ್ಜಿ ಅಷ್ಟೇ ಗುಟ್ಟಾಗಿ ಹಾಲು ಬೆಣ್ಣೆ ಮಾರಿದ ತಮ್ಮ ಕೈಗಂಟಿನಿಂದ ಆ ಸಾಲ ತೀರಿಸುತ್ತಿದ್ದರು.

ನಾಟಕದಲ್ಲಿ ಸ್ತ್ರೀಪಾತ್ರ ಸ್ತ್ರೀಯರೇ ಮಾಡಬೇಕೆಂಬುದು ರಾಘವರ ಮತ್ತು ದೊಡ್ಡನಗೌಡರ ಖಚಿತ ಅಭಿಪ್ರಾಯ. ಬಯಲಾಟಗಳಲ್ಲಿ ಪುರುಷರು ಸ್ತ್ರೀಪಾತ್ರ ವಹಿಸುವುದು ಮೊದಲಿನಿಂದಲೂ ಬಂದ ರೂಢಿ. ಹಾಗೇ ನಾಟಕಗಳಲ್ಲಿಯೂ ಪುರುಷರೇ ಸ್ತ್ರೀಪಾತ್ರ ಮಾಡುತ್ತಿದ್ದರು. ರಾಘವರು ಈ ಕ್ರಮವನ್ನು ವಿರೋಧಿಸಿದರು. ಮಡಿವಂತರ ಟೀಕೆ ನಿಂದೆಗಳಿಗೆ ಕಿವಿಗೊಡದೆ ಆದವಾನಿಯ ಪಾತ್ರರದವರನ್ನು ಸ್ತ್ರೀಪಾತ್ರಕ್ಕೆ ಕರೆತಂದರು.

ಇದೇ ರೀತಿ ಜೋಳದರಾಶಿ ನಾಟಕಗಳಿಗೆ ಆದವಾನಿ ಲಕ್ಷಮ್ಮ, ಕಂಪ್ಲಿ ಪಾರ್ವತಮ್ಮ ಮೊದಲಾದ ನಟಿಯರನ್ನು ಕರೆಸಿಕೊಂಡಿದ್ದರು. ಒಮ್ಮೆ ರಾಣಿಬೆನ್ನೂರವರು 'ಕನಕದಾಸ' ಆಡಲು ಸಮ್ಮತಿ ಕೇಳಿದ್ದರು. ಅವರು ಸ್ತ್ರೀಪಾತ್ರ ಪುರುಷರೇ ಮಾಡುತ್ತೇವೆ ಎಂದು ಹೇಳಿದ್ದರಿಂದ ರಾಘವರು "ನಿಮಗೆ ನಾಟಕಾನೇ ಕೊಡುವುದಿಲ್ಲ" ಎಂದು ನಿರಾಕರಿಸಿಬಿಟ್ಟರು. ಮದ್ರಾಸಿನಿಂದ ಬಂದಿದ್ದ ಪದ್ಮಾವತಮ್ಮ 'ಕನಕದಾಸ'ದಲ್ಲಿ ಬಚ್ಚಮ್ಮನಾಗಿ, 'ಚಾಣಕ್ಯ'ದಲ್ಲಿ ಕುರುಡನ ಮಗಳಾಗಿ ಚೆನ್ನಾಗಿ ಅಭಿನಯಿಸಿ ಹೆಸರು ಮಾಡಿದ್ದಾರೆ.

ಈ ನಾಟಕದ ಯಶಸ್ಸನ್ನು ಕೇಳಿ ಧಾರವಾಡ ಮೃತ್ಯುಂಜಯ ಅಪ್ಪಗಳು ಅದನ್ನು ನೋಡುವ ಇಚ್ಛೆ ವ್ಯಕ್ತಪಡಿಸಿದರು. ಗೌಡರು ತಮ್ಮ ತಂಡದೊಂದಿಗೆ ಧಾರವಾಡಕ್ಕೆ ಹೋಗಿ ಮುರಘಾಮಠದಲ್ಲಿ ಮೃತ್ಯುಂಜಯ ಅಪ್ಪಗಳ ಸನ್ನಿಧಿಯಲ್ಲಿ 'ಶಿವನಾಣೆ' ಪ್ರದರ್ಶಿಸಿದರು. ಅಪ್ಪಗಳ ಮೆಚ್ಚಿ ಸಂತೋಷಪಟ್ಟುದನ್ನು ಕುತಿತು ಗೌಡರು "ಮೃತ್ಯುಂಜಯ ಅಪ್ಪಗಳು ನಾಟಕ

ನೋಡಿ ತುಂಬಾ ಸಂತೋಷಪಟ್ಟರು. ನನಗಿನ್ನೇನು ಬೇಕು? ಅವರು ಸಂತೋಷಪಟ್ಟುದು ನನಗೆಲ್ಲವೂ ದೊರೆತಂತಾಯಿತು" ಎಂದು ಧನ್ಯತೆ ವ್ಯಕ್ತಪಡಿಸಿದ್ದಾರೆ (ಡೈರಿ 28-1-58). ಇದೇ ನಾಟಕವನ್ನು ಧಾರವಾಡ ಆಕಾಶವಾಣಿ ಕೇಂದ್ರ 24-2-60 ರಂದು ಪ್ರಸಾರ ಮಾಡಿತು.

'ಕನಕದಾಸ' ದೊಡ್ಡನಗೌಡರ ಮಹತ್ವದ ರಚನೆ ಮತ್ತು ಗಮನಾಹ್ ಪ್ರದರ್ಶನ. ದೊಡ್ಡನಗೌಡರ ಕನಕದಾಸ ಪಾತ್ರದ ಅಭಿನಯ ಸ್ಮರಣೀಯವಾದುದು. 27-7-40 ರಂದು ಬಳ್ಳಾರಿಯಲ್ಲಿ ಈ ನಾಟಕ ಪ್ರದರ್ಶನವಾದಾಗ ಜಿಲ್ಲಾ ಕಲೆಕ್ಟರ್ ನೋಡಲು ಬಂದಿದ್ದರು. 'ನನಗೆ ಕೆಲಸವಿದೆ ಸ್ವಲ್ಪ ಹೊತ್ತು ನೋಡಿ ಹೋಗುತ್ತೇನೆ' ಅಂದವರು ನಾಟಕ ಮುಗಿಯುವವರೆಗೆ ಕುಳಿತು ನೋಡಿ .ಮೆಚ್ಚುಗೆ ವ್ಯಕ್ತಪಡಿಸಿದರು. ನಾಡವರೆಲ್ಲರು ಮೆಚ್ಚಿಕೊಂಡು 'ಕನಕದಾಸ' ನಾಟಕವನ್ನು ತನ್ನೂರವರು ಇಷ್ಟಪಡಲಿಲ್ಲವೆಂಬ ಕೊರಗು ಗೌಡರಲ್ಲಿತ್ತು.

ರಾಘವರಿಲ್ಲದೆ ಈ ನಾಟಕ ಪ್ರದರ್ಶಿಸುವ ಸಂದರ್ಭ ಬಂದುದಕ್ಕಾಗಿ ಗೌಡರಿಗೆ ತುಂಬಾ ವ್ಯಥೆಯಾಯಿತು. ಗುರುಗಳು ಮಾಡಬೇಕೆಂದಿದ್ದ ಬಸವಣ್ಣನ ಪಾತ್ರವನ್ನು ದೊಡ್ಡನಗೌಡರು ಮಾಡಿದರು. ನಾಲ್ಕುತಿಂಗಳ ಪ್ರಾಕ್ಟೀಸಿನ ನಂತರ 8-1-48 ರಲ್ಲಿ ಜೋಳದರಾಶಿಯಲ್ಲಿ ಕ್ರಾಂತಿಪುರುಷ ಬಸವಣ್ಣ ಪ್ರದರ್ಶಿಸಲು ನಿರ್ಧರಿಸಿದರು.

ಒಮ್ಮೆ ಬಳ್ಳಾರಿಯಲ್ಲಿ ಜೋಳದರಾಶಿ ತಂಡದ ನಾಟಕಕ್ಕೆ ಪಂಚಾಕ್ಷರಿ ಗವಾಯಿಗಳವರನ್ನು ಆಮಂತ್ರಿಸಲಾಗಿತ್ತು. ಅವರು ನಾಟಕವನ್ನು, ವಿಶೇಷವಾಗಿ ಗೌಡರ ಹಾಡುಗಾರಿಕೆಯನ್ನು ತುಂಬಾ ಮೆಚ್ಚಿಕೊಂಡರು. ನಾಟಕ ಪ್ರದರ್ಶನದ ಸಂದರ್ಭದಲ್ಲಿ ದೊಡ್ಡನಗೌಡರಿಗೆ ಮರೆಯಲಾರದ ಅನುಭವಗಳಾಗಿವೆ. ಉರವಕೊಂಡ ಮಠದ ಜಾತ್ರೆಯಲ್ಲಿ 'ಜಲಂಧರ' ಆಡಲು ಸಿದ್ಧತೆಯಾಗಿದೆ.

ದೊಡ್ಡನಗೌಡರು ಒಬ್ಬ ಅಭಿಜಾತನಟ. ನಟನಿಗೆ ಪಾತ್ರಮುಖ್ಯವಲ್ಲ. ನಟನಿಗೆ ಪಾತ್ರಮುಖ್ಯವಲ್ಲ. ನಟನೆ ಮುಖ್ಯ. ಎಲ್ಲ ಪಾತ್ರಗಳನ್ನು ಸಮಾನ ಶ್ರದ್ಧೆ ಆಸಕ್ತಿಯಿಂದ ಅಭಿನಯಿಸುವುದು ಅವರ ವೈಶಿಷ್ಟ್ಯ. ಕಬೀರ್, ನಾರದ, ಕೃಷ್ಣ, ಕನಕದಾಸ, ಬಸವಣ್ಣ ಈ ಮೊದಲಾದ ಪಾತ್ರಗಳು ಗೌಡರಿಗೆ ಹೆಚ್ಚಿನ ಕೀರ್ತಿ ತಂದುಕೊಟ್ಟವು. ಹಾಗಂತ ಅವರು

ಇನ್ನುಳಿದ ಸಣ್ಣ ಪಾತ್ರಗಳ ಬಗ್ಗೆ ಅನಾಸಕ್ತಿಯಿಂದಿದ್ದರೆಂದಲ್ಲ. ಅವರಿಗೆ ಪಾತ್ರಾಭಿನಯ ನಟರಾಜನ ಸೇವೆ ಮಾತ್ರ. ಪೌರಾಣಿಕ ಐತಿಹಾಸಿಕ, ಸಾಮಾಜಿಕ ಹೀಗೆ ಸುಮಾರು ಇಪ್ಪತ್ತೈದು ವೈವಿಧ್ಯಮಯ ಪಾತ್ರಗಳನ್ನು ದೊಡ್ಡನಗೌಡರು ನಿರ್ವಹಿಸಿದ್ದಾರೆ. ಅವುಗಳು ಪಟ್ಟಿ ಹೀಗಿದೆ– ಕಂಸಿನಲ್ಲಿರುವುದು ನಾಟಕದ ಹೆಸರು. ಬಾಲವಟು (ಕನಕತಾರ), ಲವ (ಕುಶಲವ), ಕೃಷ್ಣ (ಗರುಡ ಗರ್ವಭಂಗ), ನಾರದ (ಜಲಂಧರ, ಮಾರ್ಕಂಡೇಯ), ಮಲುಹಣ (ಶಾಪವಿಮೋಚನೆ), ನಾರಾಯಣ (ಮಾಯಾ ಪ್ರಭಾವ), ಕೃಷ್ಣ (ಚಾವತಿ ಚಂದ್ರ), ಕನಕದಾಸ (ಕನಕದಾಸ), ಬಸವಣ್ಣ (ಕ್ರಾಂತಿಪುರುಷ ಬಸವಣ್ಣ), ಭಾಸ್ಕರ (ಇದ್ದದ್ದು ಇದ್ದ ಹಾಗೆ), ವೇಮನ (ಯೋಗಿ ವೇಮನ), ಭಿಕ್ಷುಕ (ಮಕಮಲ್ಲ ಟೋಪಿ), ಬಸವೇಶ್ವರ (ಚೋರಬಸವೇಶ್ವರ), ತಿರುನೀಲಕಂಠ (ಶಿವನಾಣೆ), ಕಬೀರ್ (ರಾಮದಾಸ್), ನಾರದ (ಪ್ರಹ್ಲಾದ), ಇವಿಷ್ಟು ಕನ್ನಡ ನಾಟಕ ಪಾತ್ರಗಳು. ಕಬೀರ್ (ರಾಮದಾಸ್), ನಾರದ (ಪ್ರಹ್ಲಾದ), ನಳ (ಚಿತ್ರನಳೀಯ), ರಾಮ (ಪಾದುಕಾ ಪಟ್ಟಾಭಿಷೇಕ), ಸುಬುದ್ಧಿ (ಸಾರಂಗಧರ), ದುರ್ಯೋಧನ (ಬೃಹನ್ನಳ), ಭಾಸ್ಕರ್ (ಸರಿ ಪಡನಿ ಸಂಗತುಲು), ಕಾಲೇಜ್ ವಿದ್ಯಾರ್ಥಿ (ತಪ್ಪೆವರದಿ), ಚಂದ್ರಗುಪ್ತ (ಪ್ರಚಂಡ ಚಾಣಕ್ಯ), ಇನ್ಸುರನ್ಸ್ ಏಜೆಂಟ್ ಗೋಪಾಲಸ್ವಾಮಿ (ತೆಗನಿ ಸಮಸ್ಯ), ಕೃಷ್ಣ–ಕೊರವಂಜಿ (ರುಕ್ಮಿಣಿ ಕಲ್ಯಾಣ). "ಗೌಡ, ನೀ ನಾಟಕ ಮಾಡೋದ ಬಿಟ್ಟು ನಾಟಕ ಕಲಿಸು. ನೀನು ಒಳ್ಳೆನಾಟಕ ಮಾಸ್ತರ" ಅನ್ನುತ್ತಿದ್ದರು. ಬೇರೆ ಬೇರೆ ಕಡೆಗೆ ಹೋಗಿ ನಾಟಕ ಕಲಿಸಿ ಬಂದ ಅನುಭವ ದೊಡ್ಡನಗೌಡರಿಗೆ ಉಂಟು. ರಾಘವರ ಸೂಚನೆಯಂತೆ ಸಿರ್ಸಿ ಸಮೀಪದ ಮುಂಡಗೇಸರಿಗೆ ಹೋಗಿ ಅಲ್ಲಿಯವರಿಗೆ 'ಕನಕದಾಸ' ಕಲಿಸಿ ಬಂದಿದ್ದರು.

ನಾಟಕ ದೊಡ್ಡನಗೌಡರಿಗೆ ಸರ್ವಸ್ವವಾಗಿತ್ತು. ಅವರ ಆರಾಧ್ಯದೈವ ಜೋಳದರಾಶಿಯ ರಾಮೇಶ ಮತ್ತು ನಾಟ್ಯದೇವತೆ ನಟರಾಜ, ನಾಟಕ ಪರಿಷತ್ತಿನ ಉದ್ಘಾಟನೆ, ನಾಟ್ಯಜಯಂತಿ ಮುಂತಾದ ಕಾರ್ಯಕ್ರಮಗಳಲ್ಲಿ ನಟರಾಜನ ಧ್ವಜಾರೋಹಣ ನಡೆಸುತ್ತಿದ್ದರು. ಇಂದು ಮಾರ್ಚ್ 28 ರಂದು ಆಚರಿಸುವ 'ರಂಗಭೂಮಿ ದಿನ"ವನ್ನು ಗೌಡರು 'ನಾಟ್ಯಜಯಂತಿ' ಎಂದು ಆಚರಿಸುತ್ತಿದ್ದರು.

28-03-55 ರಂದು ಸಿಡಗಿನಮಳೆಯಲ್ಲಿ ಆಚರಿಸಿದ ನಾಟ್ಯ ಜಯಂತಿ ನಟರಾಜ ಧ್ವಜಾರೋಹಣದಿಂದ ಪ್ರಾರಂಭವಾಗಿತ್ತು. ಗೌಡರು ದೇವರ ಹೆಸರು ಬರೆಯುವ ಪ್ರಸ್ತಾಪಿಸುವ ಸಂದರ್ಭ ಬಂದಲೆಲ್ಲ. 'ಜಯ ನಟರಾಜ' ಎಂದು ಬರೆದಿದ್ದಾರೆ. ಪ್ರತಿ ವರ್ಷದ ಡೈರಿ ನಟರಾಜ ವಂದನೆಯೊಂದಿಗೆ ಪ್ರಾರಂಭ. ಒಮ್ಮೊಮ್ಮೆ "ನಾಟ್ಯಕಲಾ ಸೇವೆಯಲ್ಲಿ ಅನೇಕ ಸಾರೆ ದುರ್ಬಲಗೊಂಡ ಮನವು ಚಡಪಡಿಸಿ ಹಿಂಜರಿಯುತ್ತದೆ. ಹಾಗಾಗದಂತೆ ದೃಢವಾದ ಸ್ಥೈರ್ಯ ಧೈರ್ಯಗಳನ್ನು ಅನುಗ್ರಹಿಸಿ ಈ ಜೀವನವೆಲ್ಲಾ ಕಲಾ ಸೇವೆಗಾಗಿ ವಿನಿಯೋಗವಾಗುವಂತೆ ಕರುಣಿಸೆಂದು ಆ ನಟರಾಜನಲ್ಲಿ ಪ್ರಾರ್ಥಿಸುತ್ತೇನೆ. "ಹೀಗೆ ವಿಶೇಷ ಬೇಡಿಕೆ ಸಲ್ಲಿಸಿದ್ದುಂಟು.

ದೊಡ್ಡನಗೌಡರು ಹವ್ಯಾಸಿ ನಟರು ಮತ್ತು ಅರೆ ವೃತ್ತಿ ಕಲಾವಿದರು. ಅವರಿಗಿದ್ದ ಸಾಂಸಾರಿಕ ಮಿತಿಗಳಲ್ಲಿ ಇದಿಷ್ಟೇ ಅವರಿಗೆ ಸಾಧ್ಯವಿತ್ತು. ಆದರೆ ಇದಿಷ್ಟರಿಂದ ಅವರ ನಾಟಕದ ಹಸಿವು ಹಿಂಗಿದಂತೆ ಕಾಣದು. ಪೂರ್ಣ ಪ್ರಮಾಣದ ಮೇಳ ಕಟ್ಟಿಕೊಂಡು ತೃಪ್ತಿಯಾಗುವಂತೆ ನಾಟಕಗಳನ್ನು ಪ್ರಯೋಗಿಸಿ ರಂಗಭೂಮಿಯ ಶ್ರೀಮಂತಿಕೆಯನ್ನು ಹೆಚ್ಚಿಸಬೇಕೆಂಬ ಬಯಕೆ ಅವರಿಗಿತ್ತು.

ಎಲ್ಲಕ್ಕಿಂತ ಹೆಚ್ಚಿನ ಸಹಾಯಾರ್ಥ ನಾಟಕಗಳನ್ನಾಡಿದ್ದು ಬಳ್ಳಾರಿಯ ವೀರಶೈವ ಕಾಲೇಜಿಗಾಗಿ. 45ರ ನವೆಂಬರ್, ಡಿಸೆಂಬರ್‌ಗಳಲ್ಲಿ ತೆಕ್ಕಲಕೋಟೆ, ಹಳೇಕೋಟೆ, ರಾರಾವಿ, ಕುರುವಳ್ಳಿ, ಹಚ್ಚೊಳ್ಳಿ, ಚಿಕ್ಕಬಳ್ಳಾರಿ ಮುಂತಾದ ಊರುಗಳಲ್ಲಿ ಸರಣಿ ಪ್ರದರ್ಶನಗಳನ್ನು ನೀಡಿ ವೀರಶೈವ ಕಾಲೇಜಿಗೆ ನಿಧಿ ಸಂಗ್ರಹಿಸಿದರು.

ದೊಡ್ಡನಗೌಡರು ನಿಷ್ಠುರ ವಿಮರ್ಶಕರು. ನೇರ ಮತ್ತು ಸ್ಪಷ್ಟ ಮಾತಿನವರು. ಈ ಗುಣ ಅವರ ವ್ಯಕ್ತಿತ್ವದಲ್ಲಿ ಬೆರೆತಿತ್ತು. ಮುಖ ಮುಲಾಜಿಲ್ಲದೆ ಅಭಿಪ್ರಾಯ ವ್ಯಕ್ತಪಡಿಸಿದರೆ ಜನ ತಪ್ಪು ತಿಳಿದುಕೊಂಡಾರು ಬೇಸರಪಟ್ಟುಕೊಂಡಾರು ಎಂಬುದನ್ನು ಅವರು ಗಮನಕ್ಕೆ ತಂದುಕೊಳ್ಳುತ್ತಿದ್ದಿಲ್ಲ. ತಾವು ನೋಡಿದ ನಾಟಕಗಳ ಬಗ್ಗೆ ಅವರು ಬರೆದಿಟ್ಟಿರುವ ಟಿಪ್ಪಣಿಗಳು ಅವರ ನಿಷ್ಠುರ ವಿಮರ್ಶೆಗೆ ಉದಾಹರಣೆಗೆಯಾಗಿವೆ.

ದೊಡ್ಡನಗೌಡರು ರಂಗಭೂಮಿಯಲ್ಲಿ ಬೆಳಗಿದ ಅವಧಿಯಲ್ಲಿ ಕೈಲಾಸಂ ಮತ್ತು ಶ್ರೀರಂಗರು ಹೊಸತರದ ನಾಟಕಗಳನ್ನು ಬರೆದು ಪ್ರಯೋಗಿಸಿ ಕನ್ನಡ ಹವ್ಯಾಸಿ ರಂಗಭೂಮಿಯನ್ನು ಬೆಳೆಸಿದರು. ಗೌಡರಿಗೆ ಅವರಿಬ್ಬರ ವೈಯಕ್ತಿಕ ಪರಿಚಯವಿತ್ತು. ಒಡನಾಟವಿತ್ತು. ಅವರ ರಂಗಚಟುವಟಿಕೆಗಳ ಬಗ್ಗೆ ಗೌರವಿತ್ತು. ಆದರೆ ಅವರ ನಾಟಕಗಳನ್ನು ಗೌಡರು ಮೆಚ್ಚಿಕೊಂಡಿರಲಿಲ್ಲ. "ಕೈಲಾಸಂ ಶ್ರೀರಂಗರ ನಾಟಕಗಳು ಅರ್ಥಗರ್ಭಿತನಾಟಕಗಳು ನಿಜ. ಆದರೆ ಅವರ ನಾಟಕಗಳನ್ನು ನೋಡುವ ಜನರೇ ಬೇರೆ. ಅದೊಂದು 'ಕ್ಲಾಸ್'. ಈ ಕ್ಲಾಸಿನ ಜನರನ್ನು ಬಿಟ್ಟು ಸಾಮಾನ್ಯ ಜನರಿಗೆ ಅವು ಅರ್ಥವಾಗಲಿಲ್ಲ. ಹೀಗಾಗಿ ಅವರ ನಾಟಕಗಳು ಬಹಿರಂಗ ಮಾರ್ಕೆಟ್ಟಿಗೆ ಬರದೆ ಕೇವಲ ಸ್ಕೂಲ್ ಹುಡುಗರ ನಾಟಕಗಳಾಗಿ ಉಳಿದವು" ಇದು ಗೌಡರು ನೀಡುವ ವಿವರಣೆ.

ದೊಡ್ಡನಗೌಡರಿಗೆ ಅವರ ತಾರುಣ್ಯದಲ್ಲಿ ಒಂದಿಷ್ಟು ಸಿನೆಮಾದ ಹುಚ್ಚು ಹಿಡಿದಿತ್ತು. ಬಳ್ಳಾರಿಯಲ್ಲಿದ್ದ ಡಾ. ಸುಭಾನುರಾಯರು ತಮ್ಮ ಹುಚ್ಚನ್ನು ಗೌಡರಿಗೆ ಅಂಟಿಸಿದರು. ಸ್ನೇಹಿತರೆಲ್ಲ ಸೇರಿ 'ನವನೀತ ಫಿಲ್ಮ್ ಕಂಪನಿ' ಆರಂಭಿಸಿದರು. ಷೇರು ಸಂಗ್ರಹಕ್ಕಾಗಿ ಬಳ್ಳಾರಿ, ಗದಗ, ಹುಬ್ಬಳ್ಳಿಗಳಲ್ಲಿ ಅಲೆದಾಡಿದರು. ಗದುಗಿಗೆ ಹೋದಾಗ ಗರುಡ ಸದಾಶಿವರಾಯರು. "ಗೌಡಾ, ನಿನಗ್ಯಾಕೆ ಈ ಸಿನೆಮಾ ಹುಚ್ಚು? ನಾವು ನಾಟಕದವರು ನಾಟಕದವರಾಗಿಯೇ ಇರೋಣ" ಎಂದು ಬುದ್ದಿ ಹೇಳಿದರೂ ಗೌಡರು ಕಿವಿಮೇಲೆ ಹಾಕಿಕೊಳ್ಳಲಿಲ್ಲ. ಷೇರು ಸಂಗ್ರಹಣೆಯಲ್ಲಿ ನಿರಾಶೆಯಾಯಿತು. ಅಷ್ಟರಲ್ಲಿ ಡಾ. ಸುಭಾನುರಾಯರು ನ್ಯೂಮೋನಿಯಾದಿಂದ ತೀರಿಕೊಂಡದ್ದರಿಂದ ಷೇರ ಹಣ ವಾಪಸು ನೀಡಿ ಕೈತೊಳೆದುಕೊಳ್ಳಬೇಕಾಯಿತು.

'47ರಲ್ಲಿ ಶಾಂತೇಶ್ ಪಾಟೀಲರು 'ಚಂದ್ರಹಾಸ' ಸಿನೆಮಾ ನಿರ್ಮಾಣಕ್ಕೆ ತೊಡಗಿದ್ದರು. ಹಿನ್ನೆಲೆ ಗಾಯನಕ್ಕೆ ದೊಡ್ಡನಗೌಡರನ್ನು ಕೊಲ್ಲಾಪುರಕ್ಕೆ ಕರೆಸಿಕೊಂಡರು. ಅಲ್ಲಿ ಎರಡುವಾರು ಉಳಿಯಬೇಕಾಯಿತು. ಸುತ್ತಮುತ್ತಲಿನ ಪ್ರೇಕ್ಷಣೀಯ ಸ್ಥಳಗಳನ್ನು ನೋಡುತ್ತ ಸುಖವಾಗಿ ಕಾಲಕಳೆದರು. ಗೌಡರು ಹಾಡಿದ ಪ್ರಾರ್ಥನಾ ಪದ್ಯ ರಿಕಾರ್ಡ್ ಆಯಿತು.

# ಅಧ್ಯಾಯ : 4

## ನಂದೇ ನಾನು ಓದಿದೆ

### 4.1 ಸಮಾಜ ಸೇವೆ

ದೊಡ್ಡನಗೌಡರಂಥ ಕಲಾಯೋಗಿಗಳು ಸಾರ್ವಜನಿಕ ಜೀವನಕ್ಕೆ ವಿಮುಖರೂ ಅಲೌಕಿಕರೂ ಆಗಿರುವುದು ಸಾಮಾನ್ಯ. ಆದರೆ ದೊಡ್ಡನಗೌಡರು ಹಾಗಿರಲಿಲ್ಲ. ಅವರು ಪ್ರಜ್ಞಾವಂತ ಸಾಮಾಜಿಕರಾಗಿ ಬದುಕಿದರು. ತಮ್ಮ ಕಲೆಯನ್ನು ಪ್ರೀತಿಸಿದಂತೆ ಸಮಾಜ ಜೀವನವನ್ನೂ ಪ್ರೀತಿಸಿದರು. ತಮ್ಮ ಕಲಾ ಪ್ರಪಂಚದಲ್ಲಿ ವಿಹರಿಸುತ್ತ ರಸಲೋಕದಲ್ಲಿ ತೇಲುತ್ತಿರುವಾಗಲೂ ವಾಸ್ತವಿಕ ಬದುಕನ್ನು ಸಾರ್ವಜನಿಕ ಜೀವನವನ್ನು ಅವರು ಕಡೆಗಣಿಸಲಿಲ್ಲ. ಅಲೌಕಿಕ ಲೌಕಿಕಗಳೆರಡನ್ನೂ ಸಮನ್ವಯಿಸಿ ಕೊಂಡು ಬದುಕಿದ ಶರಣಜೀವನ ಅವರದಾಗಿತ್ತು. ಅವರ ಸಮಾಜಸೇವೆ ಕೀರ್ತಿ ಪ್ರಸಿದ್ಧಿಗಾಗಿ ಅಲ್ಲ. ಅವರ ಪಾಲಿಗೆ ಸಮಾಜ ಸೇವೆಯೆಂಬುದು ಶಿಪೂಜೆಯ ಒಂದು ವಿಧಾನವಾಗಿತ್ತು. "ನಾನು ಹುಟ್ಟಿದ್ದು ಒಂದು ಕುಟುಂಬಕ್ಕೆ ಒಂದೂರಿಗೆ ಮಾತ್ರ ಉಪಯೋಗವಾಗಲಿಕ್ಕಲ್ಲ. ಈ ಶರೀರವು ನಾಡಸೇವೆಗಾಗಿ ಸೇವೆಯಲ್ಲಿ. ಜನಜೀವನದ ಉನ್ನತಿಗಾಗಿ ಬೆಳಗಲಿ" ಎಂಬುದು ಅವರ ಜೀವನ ಸಿದ್ಧಾಂತವಾಗಿತ್ತು. (ಡೈರಿ 21–05–52) ತಮ್ಮ ವೈಯಕ್ತಿಕ ತಾಪತ್ರಯಗಳನ್ನು ಗಮನಿಸದೆ ಸಮಾಜ ಸೇವೆಯಲ್ಲಿ ತೊಡಗಿಕೊಳ್ಳುವುದು ದೊಡ್ಡನಗೌಡರ ಸ್ವಭಾವವಾಗಿತ್ತು. 53ರ ನವಂಬರ್‌ದಲ್ಲಿ ಗೌಡರಮನೆಯಲ್ಲಿ ಕಳ್ಳತನವಾಗಿತ್ತು. ಆದರಿಂದ ಮನೆಯ ನೆಮ್ಮದಿ ಹಾಳಾಗಿ ಗೌಡರು ತುಂಬಾ ಕಿರಿ ಕಿರಿ ಅನುಭವಿಸುತ್ತಿದ್ದರು. ಅದೇ ಹೊತ್ತಿಗೆ ರಾಮೇಶ ಕಲಾಮಂದಿರದ ಉದ್ಘಾಟನಾ ಸಮಾರಂಭ ನಡೆಸಬೇಕಾಗಿ ಬಂದಿತು. ಗೌಡರಿಗೆ ಇಬ್ಬಂದಿ ಪರಿಸ್ಥಿತಿ. ಆಗ ಅವರು ಏನು ಮಾಡಿದರು? "ಸಂಸಾರ ತಾಪತ್ರಯಗಳನ್ನೆಲ್ಲ ಮೂಲೆಗೊತ್ತಿ ಸಾರ್ವಜನಿಕ ಕೆಲಸಗಳಲ್ಲಿ ತೊಡಗಿದ್ದೇನೆ. ಇದು ನನ್ನ ಪರೀಕ್ಷೆ. ಇದರಲ್ಲಿ ಪಾಸಾಗಲೇಬೇಕು. ರಾಮೇಶನನ್ನು ಮೆಚ್ಚಿಸಬೇಕು. ಸಾಂಸಾರಿಕ ತೊಂದರೆ ಇದ್ದದ್ದೇ. ಸಾರ್ವಜನಿಕ ಸೇವೆಗೆ ಶಿವನು ಅನುವೀಯುತ್ತಿದ್ದಾನೆ. ಅದರಲ್ಲಿ ನಾನು ಯಶಸ್ವಿಯಾಗುತ್ತೇನೆ"ಂದು ನಿರ್ಧರಿಸಿ ಹಗಲಿರುಳು ದುಡಿದು ಸಮಾರಂಭವನ್ನು ಯಶಸ್ವಿಗೊಳಿಸಿದರು.

ಗ್ರಾಮದೇವತೆ ರಾಮೇಶ ಗೌಡರ ಆರಾಧ್ಯ ದೈವ. ಆ ದೇವಸ್ಥಾನದ ಅಭಿವೃದ್ಧಿಗೆ ಗೌಡರ ತಾತ ಮುತಾತ್ತಂದಿರು ಪರಿಶ್ರಮಪಟ್ಟವರು. ಗೌಡರು ಮನೆತನದ ಸೇವಾ ಪರಂಪರೆಯನ್ನು ಮುಂದುವರೆಸಿಕೊಂಡು ಬಂದರು. '60ರಲ್ಲಿ 25 ಎಕರೆ ಭೂಮಿಯನ್ನು ರಾಮೇಶ ಬೇವಸ್ಥಾನಕ್ಕೆ ದಾನ ನೀಡಿ ರಾಮೇಶಟ್ರಸ್ಟ್ ನಿರ್ಮಿಸಿ ಆ ಟ್ರಸ್ಟ್ ಕ್ರಿಯಾಶೀಲವಾಗಿರುವಂತೆ ನೋಡಿಕೊಂಡರು. ಈ ಟ್ರಸ್ಟ್ ವತಿಯಿಂದ ಹಲವಾರು ಧಾರ್ಮಿಕ ಸಾಮಾಜಿಕ ಚಟುವಟಿಕೆಗಳು ಇಂದಿಗೂ ನಿರಂತರವಾಗಿ ನಡೆಯುತ್ತಿವೆ. ದೊಡ್ಡನಗೌಡರು ಕಾರ್ತಿಕಮಾಸದ ದೀಪೋತ್ಸವದಂದು ವಿಶೇಷ ಕಾರ್ಯಕ್ರಮ ನಡೆಸುತ್ತಿದ್ದರು. ತಿಮ್ಮಾಪುರದ ಲಿಂಗನ ಗೌಡರಿಗೆ ಸರಕಾರದಿಂದ ಕೃಷಿ ಪಂಡಿತ ಪ್ರಶಸ್ತಿ ಬಂದಾಗ ಅವರನ್ನು ಸನ್ಮಾಸಿದ್ದನ್ನು, ಸಿಡಿಗಿನಮಳೆ ಚಂದ್ರಯ್ಯನವರ ರಂಗಭೂಮಿ ಸೇವೆ ಪರಿಗಣಿಸಿ ಗೌರವಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಊರವರನ್ನೆಲ್ಲ ಕೂಡಿಸಿ ಹುರುಪುಕೊಟ್ಟು ರಾಮೇಶ ದೇವಸ್ಥಾನದ ಪಾಕಶಾಲಾ ಕಟ್ಟಡ ನಿರ್ಮಿಸುವುದರಲ್ಲಿ ಗೌಡರ ಪಾತ್ರ ಹಿರಿಯದು. ಹಾಗೇ ಚಳ್ಳಗುರ್ಕಿಯ ಎರ್ರಿತಾತನ ಮಠದ ಟ್ರಸ್ಟ್‌ನ ಸದಸ್ಯರಾಗಿ ಹಲವು ವರ್ಷ ಗೌಡರು ಸೇವೆ ಸಲ್ಲಿಸಿದ್ದಾರೆ.

1928ರಲ್ಲಿ ಜೋಳದ ರಾಶಿಗೆ ಗ್ರಾಮಪಂಚಾಯತಿ ಬಂತು. ಅಂದಿನಿಂದ ಮೂರು ದಶಕ ಕಾಲ ದೊಡ್ಡನಗೌಡರು ಪಂಚಾಯತಿ ಪ್ರೆಸಿಡೆಂಟರಾಗಿದ್ದರು. ಈ ಪ್ರೆಸಿಡೆಂಟಗಿರಿಯನ್ನು ಅವರೆಂದೂ ಒಂದು ಹುದ್ದೆಯೆಂದು ಭಾವಿಸದೆ ಸಾರ್ವಜನಿಕ ಸೇವೆಗೆ ಒಂದು ಅವಕಾಶವೆಂದು ನಂಬಿದ್ದರು. ಚುನಾವಣೆಯಿಲ್ಲದೆ ಸರ್ವಾನು ಮತದಿಂದ ಸದಸ್ಯರನ್ನು ಆರಿಸುವಂಥ ಪಂಚಾಯತಿ ಅದಾಗಿತ್ತು. ಎಷ್ಟೋ ಸಲ ಒತ್ತಾಯದಿಂದ ಎಳೆದುಕೊಂಡು ಬಂದು ಸದಸ್ಯರನ್ನು ಮಾಡುತ್ತಿದ್ದರು. ಅಂಥ ಸದಸ್ಯರು ಮೀಟಿಂಗಿಗೆ ಖಾಯಂ ಗೈರುಹಾಜರಿ. ಅವರ ಮನೆಗೆ ಮೀಟಿಂಗ್ ಬುಕ್ ಕಳಿಸಿ ಸಹಿ ಮಾಡಿಸುತ್ತಿದ್ದರು. ಗೌಡರ ಮನೆಯೇ ಆರಂಭದಲ್ಲಿ ಪಂಚಾಯತಿ ಆಫೀಸಾಗಿತ್ತು. ಗೌಡರು ಗಾಡಿ ಖಾನೆಯಲ್ಲಿ ಶಾಲೆ ಪ್ರಾರಂಭಿಸಿದರು. ವರ್ಷಕ್ಕೊಮ್ಮೆ ಸರಕಾರದ ಗ್ರ್ಯಾಂಟ್ ಬರುತ್ತಿತ್ತು. ಅಲ್ಲಿಯವರೆಗೆ ದೊಡ್ಡನಗೌಡರೇ ಮಾಸ್ತರರಿಗೆ ಪ್ರತಿ ತಿಂಗಳು ಸಂಬಳ ನೀಡುತ್ತಿದ್ದರು. ಲಾಂದರ ದೀಪಗಳು ಬಂದಾಗ ಗಡಿಬಿಡಿಯಾಯಿತು. ಅವುಗಳನ್ನು ಪ್ರತಿದಿನ ಹಚ್ಚುವವರಾರು? ಆದಕ್ಕಾಗಿ ಒಬ್ಬ ಶಿಪಾಯಿಯನ್ನಿಟ್ಟು ಕೊಂಡರೆ ಅವನಿಗೆ ಸಂಬಳ ಕೊಡುವ ಶಕ್ತಿ ಪಂಚಾಯತಿಗಿರಲಿಲ್ಲ.

ಆದ್ದರಿಂದ ಅವರವರ ಮನೆ ಮುಂದಿನ ದೀಪ ಅವರವರೇ ಹಚ್ಚಿಕೊಳ್ಳಬೇಕೆಂದು ನಿರ್ಣಯಿಸಲಾಯಿತು. ದೊಡ್ಡನಗೌಡರು ತಮ್ಮ ಪ್ರೆಸಿಡೆಂಟಗಿರಿ ತಮ್ಮ ಪ್ರೆಸಿಡೆಂಟಗಿರಿ ಅವಧಿಯಲ್ಲಿ ಸ್ವಂತದ ದೇಣಿಗೆ ಸರಕಾರದ ಗ್ರ್ಯಾಂಟು ಮತ್ತು ಊರವರ ವಂತಿಗೆ ಸೇರಿಸಿ ಪಂಚಾಯಿತಿ ಆಫೀಸು, ರಾಮೇಶ ಕಲಾಮಂದಿರ, ಪೋಸ್ಟಾಫೀಸು, ಆಸ್ಪತ್ರೆ, ಸಹಕಾರಿ ಸಂಘ, ಪ್ರಾಥಮಿಕ ಶಾಲೆ ಮೊದಲಾದವುಗಳಿಗೆ ಕಟ್ಟಡ ಕಟ್ಟಿಸಿದರು. ಶಾಲಾ ಕಟ್ಟಡಕ್ಕೆ ತಮ್ಮ ಹೊಲದಲ್ಲಿದ್ದ ಮರಗಳನ್ನು ಕೊರೆಸಿಕೊಟ್ಟರು. ಜೋಳದರಾಶಿಗೆ ವಿದ್ಯುತ್ ಬರಲು ಕುಡಿಯುವ ನೀರಿನ ವ್ಯವಸ್ಥೆಯಾಗಲು ದೊಡ್ಡನಗೌಡರೇ ಕಾರಣರು. ವಯಸ್ಸಾದಂತೆ ದೊಡ್ಡನ ಗೌಡರು ಪ್ರಸಿಡೆಂಟಗಿರಿಯಲ್ಲಿ ಆಸಕ್ತಿ ಕಳೆದುಕೊಂಡರು. ಅದಕ್ಕೆ ಇನ್ನೊಂದು ಕಾರಣ–ಊರಲ್ಲಿ ಕಾಣುತ್ತಿದ್ದ ಪರಿವರ್ತನೆ. ಪಾರಂಪರಿಕ ಹಿರಿಯತನದ ಬಗ್ಗೆ ತರುಣರಿಗೆ ಗೌರವವಿಲ್ಲವೆಂಬುದು ಅವರಿಗೆ ಅರ್ಥವಾಯಿತು. ಆದ್ದರಿಂದ ಗೌಡರು ಪಂಚಾಯತಿಯಿಂದ ಸ್ವಯಂ ನಿವೃತ್ತರಾದರು 12–03–56 ರಂದು ಎಲ್ಲ ಲೆಕ್ಕ ಪತ್ರಗಳೊಂದಿಗೆ ಬಳ್ಳಾರಿ ತಹಶೀಲದಾರರಿಗೆ ಛಾರ್ಜ್ ಒಪ್ಪಿಸಿದರು. ಆಗ ಅವರಿಗೆ ಪಂಚಾಯಿತಿಯಿಂದ 170 ರೂ. ಬರಬೇಕಿತ್ತು ಅಂದಿನ ಡೈರಿಯಲ್ಲಿ "ಶಿವನ ಕೃಪೆಯಿಂದ ಈ ಪಂಚಾಯತಿ ಬಂಧನದಿಂದ ಪಾರಾದೆ. ಬಂಧಮುಕ್ತತೆಯಿಂದ ಆನಂದವಾಗಿದೆ. ಈ ಪಂಚಾಯತಿಯಿಂದ ಗ್ರಾಮಕ್ಕೆಲೇಸಾಗಲೆಂದು ಹಾರೈಸುವೆ" ಎಂದು ಬರೆದಿದ್ದಾರೆ.

ದೊಡ್ಡನಗೌಡರು ನಾಡಿನ ತುಂಬ ಹೆಸರು ಮಾಡಿದ ಕಲಾವಿದರಾಗಿದ್ದರೂ ತಮ್ಮನ್ನು ತಾವು ಒಬ್ಬ ರೈತ ಎಂದು ಹೆಮ್ಮೆಯಿಂದ ಕರೆದುಕೊಳ್ಳುತ್ತಿದ್ದರು. ಒಕ್ಕಲುತನ ವನ್ನಾಶ್ರಯಿಸಿದ ದೊಡ್ಡ ಅವಿಭಕ್ತ ಕುಟುಂಬದ ಯಜಮಾನರಾಗಿದ್ದ ಗೌಡರಿಗೆ ತಮ್ಮ ಮನೆತನದ ವೃತ್ತಿಯ ಬಗ್ಗೆ ಕಾಳಜಿಯಿತ್ತು. ತಿಳುವಳಿಕೆಯಿತ್ತು. ಜೊತೆಗೆ ರೈತರ ಕಷ್ಟಸುಖಗಳನ್ನು ಸಮಸ್ಯೆಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ರೈತರು ಸಂಘಟಿತ ರಾಗಿ ಹೋರಾಟ ಮಾಡಲಾರದೆ ಅವರ ಸಮಸ್ಯೆಗಳು ಬಗೆ ಹರಿಯಲಾರವೆಂಬುದು ಗೌಡರ ಅಭಿಪ್ರಾಯವಾಗಿತ್ತು. ಹೀಗಾಗಿ ರೈತರ ಸಂಘಟನೆಗೆ ಯಥಾ ಶಕ್ತಿ ಪ್ರಯತ್ನಿಸಿದರು. '45ರಲ್ಲಿ ಬಾಮರದಲ್ಲಿ ಸ್ಥಾಪನೆಗೊಂಡ ರೈತ ಸಂಘದ ಸಂಘಟಕರಲ್ಲಿ ದೊಡ್ಡನಗೌಡರೂ ಒಬ್ಬರು. 45ರಲ್ಲಿ ಜೋಳದರಾಶಿಯಲ್ಲಿ ಪ್ರಾರಂಭವಾದ ರೈತ ಸಂಘಕ್ಕೆ ಗೌಡರು ಹಿರಿಯ ಮಾರ್ಗದರ್ಶಕರಾಗಿದ್ದರು. 56ರಲ್ಲಿ

ಯಾದಗಿರಿಯಲ್ಲಿ ನಡೆದ ರೈತಪರಿಷತ್ತಿಗೆ ಹೋಗಿ ಸಕ್ರೀಯವಾಗಿ ಪಾಲ್ಗೊಂಡಿದ್ದರು. 68ರಲ್ಲಿ ಚೆಳ್ಳಗುರ್ಕಿಯಲ್ಲಿ ಸುತ್ತಲಿನ ತರುಣರೈತರೆಲ್ಲ ಸಭೆ ಸೇರಿ ರೈತಯುವಕ ಸಂಘಸ್ಥಾಪಿಸಿದರು.

ದೊಡ್ಡನಗೌಡರು ರಂಗಭೂಮಿಯ ಧೀಮಂತ ನಟರಾಗಿ ನಾಟಕಕಾರರಾಗಿ ಸುಪ್ರಸಿದ್ಧಿ ಪಡೆದವರು. ಆದರೆ ರಂಗಭೂಮಿಯ ಪುರೋಭಿವೃದ್ಧಿಗಾಗಿ ಅವರು ಮಾಡಿದ ಸೇವೆ ಸಂಘಟನೆ–ಪ್ರಯತ್ನಗಳು ಅಷ್ಟೊಂದು ಪ್ರಸಿದ್ಧಿಪಡೆದಿಲ್ಲ. ಕಲಾವಿದರು ಸಾಮಾನ್ಯವಾಗಿ ಸಂಘಟನೆಯ ಸಂದರ್ಭದಲ್ಲಿ ಸೋಲುತ್ತಾರೆ. ದೊಡ್ಡನಗೌಡರು ಸಮರ್ಥ ಕಲಾವಿದ–ಸಂಘಟಕರು.

ರಂಗಭೂಮಿಗೆ ಉನ್ನತಿಕೆಯನ್ನು ಪೂಜ್ಯತೆಯನ್ನು ತಂದುಕೊಡಬೇಕು– ಈ ಉದ್ದೇಶಗಳಿಗಾಗಿ ಬಳ್ಳಾರಿ ಜಿಲ್ಲಾ ನಾಟಕ ಕಲಾ ಪರಿಷತ್ ಸ್ಥಾಪಿಸಿದರು (2–9–1948). ಗೌಡರು ಅಧ್ಯಕ್ಷರು ಚಿಂತಕುಂಟೆ ವೀರಭದ್ರಪ್ಪ ಉಪಾಧ್ಯಕ್ಷ, ಚಂದ್ರಯ್ಯ ಪ್ರಧಾನ ಕಾರ್ಯದರ್ಶಿ, ಶಿವಚೆನ್ನ ಬಸವೇಶ್ವರ ಮತ್ತು ಕುಮಾರಸ್ವಾಮಿ ಕಾರ್ಯದರ್ಶಿಗಳು. ಈ ಪರಿಷತ್ತು ಪೂರ್ತಿಯಾಗಿ ದೊಡ್ಡನಗೌಡರ ಕಲ್ಪನೆಯ ಕೂಸು. 5–12–48ರಂದು ಪ್ರಥಮ ನಾಟಕ ಪರಿಷತ್ತು ಜೋಳದರಾಶಿಯಲ್ಲಿ ನಡೆಯಿತು. ಜೋಳದರಾಶಿಯಂಥ ಸಣ್ಣ ಹಳ್ಳಿಯಲ್ಲಿ ಇಂಥದೊಂದು ಬೃಹತ್ ಸಮ್ಮೇಳನವನ್ನು ಯಶಸ್ವಿಯಾಗಿ ನಡೆಸುವುದು ಗೌಡರ ಸಂಘಟನಾ ಶಕ್ತಿಗೆ ಒಂದು ಆಹ್ವಾನವಾಗಿತ್ತು. ವೈಯಕ್ತಿಕವಾಗಿ ದೊಡ್ಡನಗೌಡರ ಮತ್ತು ಅವರ ಮನೆತನದ ಪ್ರಭಾವದಿಮದಾಗಿ ಪರಿಷತ್ತು ಯಶಸ್ವಿಯಾಗಿ ನಡೆಯಿತು. ಗರುಡ ಸದಶಿವರಾಯರು ಅಧ್ಯಕ್ಷರು, ಗುಬ್ಬಿವೀರಣ್ಣನವರು ಉದ್ಘಾಟಕರು. ಧ್ವಜವಂದನೆ ಮಹಾಬಲೇಶ್ವರಪ್ಪನವರಿಂದ. ಇಡೀ ಊರು ಒಂದಾಗಿ ನಿಂತು ದುಡಿದರು. ಪಕ್ಕದ ಹಳ್ಳಿಯವರು ಕಾರ್ಯಕರ್ತರಾಗಿ ಸೇವೆಸಲ್ಲಿಸಿದರು. ಸುಮಾರು 5 ಸಾವಿರ ಜನ ಸೇರಿದ್ದರು. ಅದೊಂದು ಅಭೂತಪೂರ್ವ ಸಮ್ಮೇಳನ. ಕೂಡಿದವರು ಜೋಳದರಾಶಿ ಇಂದು ಕಲಾರಾಶಿಯಾಯಿತೆಂದು ಹೊಗಳಿದರು. ಪ್ರತಿನಿಧಿಗಳಿಗೆ ಊಟದ ಚೀಟಿ ಹಂಚಿದ್ದರು. ಇದಕ್ಕೆ ಗೌಡರ ತಂದೆಯ ವಿರೋಧ. 'ರೊಕ್ಕಾ ತಗೊಂಡು ಊಟ ಹಾಕಿದ್ರು ಅಂದ್ರೆ ಊರಿಗೆ ಮರ್ಯಾದಿ ಬಂದೀತಾ? ಎಂದು ಸಿಟ್ಟುಗೊಂಡು ಚೀಟಿ ಹರಿದು ಹಾಕಿದರು. ಬಂದವರೆಲ್ಲರಿಗೂ ಉಚಿತವಾಗಿ ಊಟ ನೀಡಲಾಯಿತು.

ನಾಟಕಪರಿಷತ್ತು ಎರಡು ಯೋಜನೆಗಳನ್ನು ಕೈಗೆತ್ತಿಕೊಂಡಿತು. ಒಂದು-ಬಳ್ಳಾರಿ ಜಿಲ್ಲಾ ನಾಟಕ ಕಲಾವಿದರ ಪರಿಚಯ ಪುಸ್ತಕ ಪ್ರಕಟಿಸುವುದು, ಎರಡು-ಒಂದು ಮಾದರಿ ನಾಟಕ ಸಿದ್ಧಪಡಿಸಿ ಅದನ್ನು ಜಿಲ್ಲೆಯಾದ್ಯಂತ ಪ್ರದರ್ಶಿಸಿ ಜನರಲ್ಲಿ ಒಳ್ಳೆಯ ನಾಟಕ ಅಭಿರುಚಿ ಬೆಳೆಸುವುದು. ಕಲಾವಿದರ ಮಾಹಿತಿ ಸಂಗ್ರಹಕ್ಕಾಗಿ ಚಂದ್ರಯ್ಯ ಬಹಳಷ್ಟು ತಿರುಗಾಡಿದರು. ದೊಡ್ಡನಗೌಡರ 'ಕ್ರಾಂತಿ ಪುರುಷ ಬಸವಣ್ಣ' ಮಾದರಿ ನಾಟಕವನ್ನಾಗಿ ಆಯ್ಕೆಮಾಡಿಕೊಳ್ಳಲಾಯಿತು. ಅದರ ಪ್ರ್ಯಾಕ್ಟೀಸು ಬಳ್ಳಾರಿಯಲ್ಲಿ. ಅದೇ ಹೊತ್ತಿಗೆ ರಾಘವರ ಸ್ಮಾರಕ ದಿನಾಚರಣೆಯಂದು ತೆಲುಗು 'ಬೃಹನ್ನಳೆ' ಆಡಲು ನಿರ್ಧರಿಸಿದರು. ಹಗಲು ಬೃಹನ್ನಳೆಯ ಪ್ರ್ಯಾಕ್ಟೀಸು, ರಾತ್ರಿ ಬಸವಣ್ಣನ ಪ್ರ್ಯಾಕ್ಟೀಸು. ದಣಿವರಿಯದ ಈ ಪ್ರ್ಯಾಕ್ಟೀಸುಗಳ ಬಗ್ಗೆ ಗೌಡರು "ಒಂದು ರೀತಿಯ ನಾಟ ಕೋನ್ಮಾದವು ನನ್ನಲ್ಲಿ ಭೂತದಮತೆ ಆವೇಶವಾಗಿತ್ತು" ಎಂದಿದ್ದಾರೆ. ಪರಿಷತ್ತಿಗಾಗಿ ಬಸವಣ್ಣನ ನಾಟಕವನ್ನು ಅಲ್ಲಲ್ಲಿ ಪ್ರದರ್ಶಿಸಿ ಒಂದಿಷ್ಟು ಹಣ ಸಂಗ್ರಹಿಸಿದರು. ಬಂಡಿಯಲ್ಲಿ ಹಳ್ಳಿಹಳ್ಳಿ ತಿರುಗಾಡಿ ಪರಿಷತ್ತಿಗೆ ಸದಸ್ಯರನ್ನು ಮಾಡಿಕೊಂಡರು.

ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ದೊಡ್ಡನಗೌಡರು ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡಿದ್ದರು. ಏಕೀಕರನದ ಸಭೆಗಳು ಕಳೆಗಟ್ಟಬೇಕಾದರೆ ಗೌಡರ ಕಾವ್ಯವಾಚನ ಅನಿವಾರ್ಯವಾಗಿತ್ತು. '44ರ ಧಾರವಾಡ ಸಭೆಯಲ್ಲಿ ಗೌಡರು 'ನಮ್ಮ ಹಂಪಿ' ವಾಚಿಸಿದ್ದು ಸ್ಮರಣೀಯವಾದುದು. ದೊಡ್ಡಮೇಟಿ ಅಂದಾನಪ್ಪ ಮತ್ತು ಉರವಕೊಂಡ ಕರಿಬಸವ ಸ್ವಾಮಿಗಳೊಂದಿಗೆ ಆದವಾನಿ ಆಲೂರು ರಾಯದುರ್ಗ ಬಳ್ಳಾರಿ ತಾಲೂಕುಗಳಲ್ಲಿ ಮತ್ತು ಬಿಜಾಪುರ ಜಿಲ್ಲೆಯ ಚಡಚಣ, ಬಾಗಲಕೋಟೆ, ಇಳಕಲ್ಲ ಬಸವನ ಬಾಗೇವಾಡಿ ಮುಂತಾದ ಊರುಗಳಿಗೆ ಹೋಗಿ ಏಕೀಕರಣ ಸಭೆಗಳನ್ನು ಸಂಘಟಿಸಿದರು. ಪ್ರತಿ ಸಭೆ ಗೌಡರ ಪ್ರಾರ್ಥನೆಯಿಂದ ಪ್ರಾರಂಭವಾಗಿ ಭಾಷಣಗಳ ನಂತರ ಕಾವ್ಯವಾಚನದಿಂದ ಮುಗಿಯುತ್ತಿತ್ತು. ದೊಡ್ಡಮೇಟಿ ಅಂದಾನಪ್ಪನವರು ಜಕ್ಕಲಿಯಲ್ಲಿ ನಡೆಸುತ್ತಿದ್ದ ಕರ್ನಾಟಕ ರಾಜ್ಯ ನಿರ್ಮಾಣ ಶಿಬಿರದಲ್ಲಿ ಗೌಡರು ಭಾಗವಹಿಸಿದ್ದರು. ಕರ್ನಾಟಕ ಏಕೀಕರಣದ ಮೊದಲ ಹಂತವಾಗಿ 2-10-53 ರಂದು ಬಳ್ಳಾರಿ ಮೈಸೂರು ರಾಜ್ಯ ಸೇರಿತು. ಇತ್ತ ಮನೆಯಲ್ಲಿ ನಾಗಮ್ಮಜ್ಜಿ ಮರಣ ಶೈಯ್ಯೆಯಲ್ಲಿ ಮಲಗಿರುವುದನ್ನು ಲೆಕ್ಕಿಸದೆ ಗೌಡರು ಬಳ್ಳಾರಿಗೆ ಹೋಗಿ ಉತ್ಸವದಲ್ಲಿ ಪಾಲ್ಗೊಂಡರು.

ಕರ್ನಾಟಕ ಏಕೀಕರಣದ್ದೊಂದು ಕತೆಯಾದರೆ ಬಳ್ಳಾರಿ ಹೋರಾಟದ್ದು ಇನ್ನೊಂದು ಕತೆ. ತೆಲುಗರು ಬಳ್ಳಾರಿಯನ್ನು ಕಬಳಿಸಲು ಹೊಂಚು ಹಾಕಿದ್ದರು. ಕನ್ನಡಿಗರ ಉಗ್ರ ಹೋರಾಟದ ಫಲವಾಗಿ ಬಳ್ಳಾರಿ ಕರ್ನಾಟಕದಲ್ಲಿ ಉಳಿಯುವಂತಾಯಿತು. ದೊಡ್ಡನಗೌಡರು ಈ ಹೋರಾಟದಲ್ಲಿ ಅತ್ಯಂತ ಉತ್ಸಾಹದಿಂದ ಕೆಲಸಮಾಡಿದರು. ಅಧ್ಯಯನ ಸಮಿತಿ ಸದಸ್ಯರು ಗುಂಟಕಲ್‌ದಿಂದ ಕಾರಿನಲ್ಲಿ ಬಳ್ಳಾರಿಗೆ ಬರುತ್ತಿದ್ದರು. ಮಧ್ಯದಲ್ಲಿ ಅವರನ್ನು ತಡೆಯಬಾರದೆಂಬ ಪೋಲೀಸ್ ಇನ್ಸ್‌ಪೆಕ್ಟರ್ ಮಾತನ್ನು ಲೆಕ್ಕಿಸದೆ ಗೌಡರು ಕಾರು ನಿಲ್ಲಿಸಿ "ನಮ್ಮ ಜೋಳದರಾಶಿ ಕನ್ನಡ ಗ್ರಾಮ, ಬಳ್ಳಾರಿಯನ್ನು ತುಂಡು ಮಾಡಬಾರದು" ಎಂದು ಹೇಳಿ ಕಳಿಸಿದರು. ಜೋಳದರಾಶಿ ಕನ್ನಡ ಗ್ರಾಮವೆಂದು ಪಂಚಾಯಿತಿ ಮಿಟಿಂಗಿನಲ್ಲಿ ಒಮ್ಮತದ ತೀರ್ಮಾನ ಕೈಕೊಂಡು ಅದನ್ನು ಮೇಲಾಧಿಕಾರಿಗಳಿಗೆ ತಿಳಿಸಿದರು. ಚೆಳ್ಳಗುರ್ಕಿಯಲ್ಲಿ ಗಡಿಭಾಗದ ಪಂಚಾಯಿತಿ ಪ್ರಸಿಡೆಂಟರುಗಳು ಗೌಡರ ಅಧ್ಯಕ್ಷತೆಯಲ್ಲಿ ಮೀಟಿಂಗ್ ಸೇರಿ ಬಳ್ಳಾರಿ ಸಿರುಗುಪ್ಪ ಹೊಸಪೇಟೆ ತಾಲೂಕುಗಳನ್ನು ಆಂದ್ರಕ್ಕೆ ಸೇರಿಸಬಾರದೆಂದು ಠರಾವು ಪಾಸು ಮಾಡಿದರು. ಬಳ್ಳಾರಿ ಹೋರಾಟ ತೀವ್ರಗೊಂಡು ಗೌಡರನ್ನು ಇಕ್ಕಟ್ಟಿನಲ್ಲಿ ಸಿಲುಕಿಸಿತು. ಬಹಳಷ್ಟು ತೆಲುಗರು ಗೌಡರ ಸ್ನೇಹಿತರೂ ಅಭಿಮಾನಿಗಳೂ ಆಗಿದ್ದರು. ಅವರೆಲ್ಲರ ಪ್ರೀತಿ ವಿಶ್ವಾಸಗಳನ್ನು ಉಳಿಸಿಕೊಂಡೇ ಕನ್ನಡ ಪರ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಹೋರಾಟದ ಸಭೆಗಳಿಗಾಗಿ ಲಾವಣಿ ಬರೆದುಕೊಟ್ಟರು. ಮಹತ್ವದ ಸಭೆಗಳಲ್ಲಿ ಸ್ವತಃ ತಾವೇ ಹಾಡಿದರು. ಬಳ್ಳಾರಿ ಹೋರಾಟ ನಿರ್ಣಾಯಕ ಹಂತ ತಲುಪಿದ್ದು 56ರ ವಿಧಾನಸಭೆ ಚುನಾವಣೆಯ ಸಂದರ್ಭದಲ್ಲಿ ತೆಲುಗು-ಕನ್ನಡಿಗರಿಬ್ಬರಿಗೂ ಇದು ಅಂತಿಮ ಹೋರಾಟದ ಸಂದರ್ಭವಾದುದ್ದರಿಂದ ಅತ್ಯಂತ ತುರುಸಿನಿಂದ ಚುನಾವಣೆ ನಡೆಯಿತು. ಕನ್ನಡಿಗರ ಅಭ್ಯರ್ಥಿ ಹರಗಿನಡೋಣಿ ಸಣ್ಣಬಸವನಗೌಡರು ಚುನಾವಣೆಯಲ್ಲಿ ಗೆದ್ದರು. ಗೌಡರು ತಮಗಾದ ಸಂತೋಷವನ್ನು "ಪಂಪಾಪತಿ ದಯದಿಂದ ತೆಲುಗರ ಜಯಾಪೇಕ್ಷೆಯು ಸೂರ್ಯಾಸ್ತದೊಂದಿಗೆ ಅಸ್ತವಾಯಿತು. ಚಂದ್ರೋಯವಾಗಿ ಕನ್ನಡ ಚಕೋರಪಕ್ಷಿಗಳು ನಲಿಯ ತೊಡಗಿದವು. ರಾತ್ರಿ 10 ಗಂಟೆಗೆ ಶುಭವಾರ್ತೆ ಜಯವಾರ್ತೆ ತಿಳಿದು ಬಳ್ಳಾರಿಯೇ ಅಲ್ಲ ಇಡೀ ಕರ್ನಾಟಕ ಸಂತೋಷ ಸಾಗರದಲ್ಲಿ ಈಜಾಡಿತು". ಹೀಗೆ ದಾಖಲಿಸಿದ್ದಾರೆ (ಡೈರಿ 11-

06–56). ವಿಜಯೀ ಅಭ್ಯರ್ಥಿ ಸಣ್ಣ ಬಸವನಗೌಡರನ್ನು ಜೋಳದರಾಶಿಗೆ ಕರೆಸಿಕೊಮಡು ಸನ್ಮಾನಿಸಿ ವಿಜಯೋತ್ಸವ ಆಚರಿಸಿದರು.

ದೊಡ್ಡನಗೌಡರು 1965 ರಿಂದ 1968ರ ವರೆಗೆ ರಾಜ್ಯ ಸಂಗೀತನಾಟಕ ಅಕಾಡೆಮಿಯ ಸದಸ್ಯರಾಗಿದ್ದರು. ಈ ಸದಸ್ಯತ್ವ ಅವರಿಗೆ ಅನಿರೀಕ್ಷಿತವಾಗಿ ಆಯಾಚಿತವಾಗಿ ಬಂದಿತು. ಉತ್ಸಾಹದಿಂದ ಮೀಟಿಂಗುಳಿಗೆ ಹೋಗಿ ಬರುತ್ತಿದ್ದರು. ಅಕಾಡೆಮಿಯ ಕಾರ್ಯ ಚಟುವಟಿಕೆಗಳ ಬಗ್ಗೆ ಅವರಿಗೆ ತೃಪ್ತಿ ಇರಲಿಲ್ಲ. ದೊಡ್ಡನ ಗೌಡರ ಮತ್ತು ಅವರಂಥವರ ಸತತ ಒತ್ತಾಯದಿಂದ ಬೆಂಗಳೂರಿನ ಕೂಪಸ್ಥ ಮಂಡೂಕವಾಗಿದ್ದ ಸಂಗೀತನಾಟಕ ಅಕಾಡೆಮಿ ಬೆಂಗಳೂರಿನಿಂದ ಹೊರಗೆ ಬಂದಿತು. ಜನವರಿ 72ರಲ್ಲಿ ಬಳ್ಳಾರಿಯಲ್ಲಿ ವೃತ್ತಿ ನಾಟಕೋತ್ಸವ ನಡೆಸಲಾಯಿತು.

ವೈ. ಮಹಾಬಳ್ಳೇಶ್ವರಪ್ಪನವರ ಮತ್ತು ವೈ. ನಾಗೇಶ ಶಾಸ್ತ್ರಿಗಳ ಷಷ್ಟಿಪೂರ್ತಿ ಸಮಾರಂಭಗಳಿಗೆ, ಗುಬ್ಬಿವೀರಣ್ಣನವರ ಸನ್ಮಾಸಮಿತಿಗೆ ದೊಡ್ಡನಗೌಡರು ಕಾರ್ಯದರ್ಶಿಗಳಾಗಿ ನಿಸ್ಪ್ರಹ ಸೇವೆ ಸಲ್ಲಿಸಿದ್ದಾರೆ. ಈ ಮೂರು ಸನ್ಮಾನ ಸಮಾರಂಭಗಳು ಬಳ್ಳಾರಿ ಚರಿತ್ರೆಯಲ್ಲಿ ಸ್ಮರಣೀಯವಾಗಿ ಉಳಿಯಲು ಗೌಡರ ಸಂಘಟನಾಶಕ್ತಿ ಮತ್ತು ಕ್ರಿಯಾಶೀಲತೆಗಳೇ ಕಾರಣ. ಬಳ್ಳಾರಿಯಲ್ಲಿ ಆಸಕ್ತ ಗೆಳೆಯರೆಲ್ಲ ಸೇರಿ ಒಂದು ಸಾಹಿತ್ಯ ಸಂಘ ಕಟ್ಟಿಕೊಂಡಿದ್ದರು. ಅದರ ಸಕ್ರೀಯ ಸದಸ್ಯರಲ್ಲಿ ದೊಡ್ಡನಗೌಡರೂ ಒಬ್ಬರು.

**4.2 – ಸಿನಿಮಾಕ್ಷೇತ್ರ**

15–05–1939 ರಲ್ಲಿ ಸನಿಮಾ ರಂಗದಲ್ಲಿ ಕಾಲಿಟ್ಟ ದೊಡ್ಡನಗೌಡರ ಸ್ನೇಹಿತರು, ಮನೆಯ ಡಾಕ್ಟರ್‌ರೂ, ಆದ ಸುಭಾನುರಾಯರು. ಸಿನಿಮಾ ಹುಚ್ಚಿಗಿಳಿದು ಗೌಡರನ್ನು ಇಳಿಸಿದರು. ಇವರಿಗೆ ಈ ಹುಚ್ಚು ಹೇಗೆ ಹತ್ತಿತೋ ಆಶ್ಚರ್ಯ ಹೆಚ್ಚಾಗಿ ಇವರು ಒಮ್ಮೆ ಯಾವುದನ್ನಾದರೂ ಹಿಡಿದರೆಂದರೆ ಬಿಡುವವರಲ್ಲ. ಆ ಕಾಲದಲ್ಲಿ ಸಿನಿಮಾ ವ್ಯವಸಾಯ ಕರ್ನಾಟಕದಲ್ಲಿ ಬಹಳ ಹಿಂದುಳಿದುದಲ್ಲದೆ ಆ ವ್ಯವಸಾಯಕ್ಕೆ ಕೈಯಿಕ್ಕಿದವರ ಗೌರವವು ಉಳಿದಿರಲಿಲ್ಲ.

ಆಗಲೇ ಚಿರಂಜೀವಿ ಚಿತ್ರಪಟವು ಸಾವಿಗೆ ತುತ್ತಾಗಿತ್ತು. ಸಂಸಾರ ಸಾಕೆಯಂಥ ಒಂದೆರಡು ಕನ್ನಡ ಚಿತ್ರಗಳು ಪ್ರಥಮ ಯಶಸನ್ನುಗಳಿಸಿದ್ದರೂ ಲಕ್ಷಾಂತರ ಹಣದ ವ್ಯವಹಾರಕ್ಕೆ ಅದು ಸಾಲದಾಗಿತ್ತು. ಮೊದಲು ಚಿತ್ರಗಳು ಹಂಚಿಕೆಯಿಂದ ಚಿತ್ರ ನಿರ್ಮಾಣಕ್ಕೇರಬೇಕೆಂಬ ಉದ್ದೇಶ ಇವರಾದಾಗಿತ್ತು. ಲಿಮಿಟೆಡ್ ಕಂಪನಿಯ ಕಾನೂನಿನಂತೆ ಎಂಟು ಜನ ಡೈರೆಕ್ಟರರಾದರೂ ಬೇಕಾಗಿತ್ತು, ಬಳ್ಳಾರಿಯಲ್ಲಿಯ ಮುಖಂಡರನ್ನು ಕೇಳಿದಾಗ ಇವರ ಉದ್ಯಮಕ್ಕೆ ಪ್ರೋತ್ಸಾಹ ದೊರೆಯಲಿಲ್ಲ. ಜಿಲ್ಲೆಯ ಹೊರಗಿನ ಅವರಿವರನ್ನು ಸೇರಿಸಿಕೊಂಡು ಕಂಪನಿಯ ರಿಜಿಸ್ಟ್ರೇಷನ್ ಮಾಡಿಯೂ ಆಯಿತು. ತರುವಾಯ ಇವರ ಪ್ರಾಸ್ಪೆಕ್ಟಸ್ ಪ್ರಚಾರ, ಷೇರುಗಳ ಸಂಗ್ರಹಕ್ಕಾಗಿ ಅಲ್ಲಿ ಇಲ್ಲಿ ಅಡ್ಡಾಡುವುದು ನಡೆದೇ ಇತ್ತು. ದೊಡ್ಡವರಲ್ಲಿ ಹೋದಾಗ ದೊಡ್ಡ ಮಾತಿನ ಪುರಸ್ಕಾರ ಸಿಕ್ಕಿತಾಗಲಿ ಇವರ ಉದ್ದೇಶ ಕೆಲಸಗಳಿಗೆ ಹಣ ದೊರೆಯುತ್ತಿರಲಿಲ್ಲ, ಇವರ ಡೈರೆಕ್ಟರರಲ್ಲಿ ಯಾರಿಗೂ ಈ ಬಗ್ಗೆ ಅಭಿರುಚಿ ಆಸಕ್ತಿ ಇರಲಿಲ್ಲ. ಮೇನೆಜಿಂಗ್ ಡೈರೆಕ್ಟರ್‌ರಾದ ಡಾಕ್ಟರ್ ಸುಭಾನುರಾರು ದೊಡ್ಡನಗೌಡರು ಕೈಯಲ್ಲಿ ಚೀಲ ಹಿಡಿದುಕೊಂಡು ಉತ್ತರ ಕರ್ನಾಟಕದ ಪ್ರವಾಸ ಹೊರಟರು.

ಗದಗಿನಲ್ಲಿ ಸುಪ್ರಸಿದ್ಧ ನಟರಾದ ಸದಾಶಿವರಾವ್ ಗರುಡ ಇವರೊಂದಿಗೆ ಸಮಾಲೋಚನೆ ನಡೆಯಿಸಿ ಅವರೊಂದಿಗೆ ಅಲ್ಲಿನ ಶ್ರೀಮಂತ ಮುಖಂಡರನ್ನು ಕಂಡಾಗ ಅವರಲ್ಲೊಬ್ಬರು ಚಿತ್ರಗಳ ಹಂಚಿಕೆಯಲ್ಲಿ ಅಷ್ಟೇನೂ ಫಲವಿಲ್ಲ. ಚಿತ್ರ ನಿರ್ಮಾಣವನ್ನೇ ಕೈಕೊಳ್ಳುವುದಾದರೆ ಸಹಾಯ ನೀಡುವುದಾಗಿ ಹೇಳಿದ್ದರಿಂದ ಅದರಂತೆ ಸಂಯುಕ್ತ ಕರ್ನಾಟಕ

ಪತ್ರಿಕೆಯಲ್ಲಿ ಪ್ರಸಿದ್ಧಿಪಡಿಸಲಾಯಿತು. ಕರ್ನಾಟಕದ ಸಿನಿಮಾ ರಂಗದ ಬಗ್ಗೆ ದೊಡ್ಡನಗೌಡರ ಕೆಲವು ಲೇಖನಗಳು ಪತ್ರಿಕೆಯಲ್ಲಿ ಪ್ರಕಟವಾದವು. ಸಲಹೆ ಇತ್ತ ಗದುಗಿನ ಶ್ರೀಮಂತರು ಕೊನೆಗೆ ಯಾವ ಸಹಾಯ ಮಾಡದೆ ಭವಿಷ್ಯತ್ತಿಗೆ ತಮ್ಮ ಸಹಾಯ ನೂಕಿ ಇವರಿಗೆ ಮಂಗಳ ಹೇಳಿದರು. ಶ್ರೀ ಗರುಡ ಸದಾಶಿವರಾಯರಿಂದ ದೊರೆಯಬೇಕಾದಷ್ಟು ಸಹಾಯ ದೊರೆತರೂ ಅಷ್ಟು ಪ್ರಯೋಜನವಾಗಲಿಲ್ಲ. ತರುವಾಯ ಹುಬ್ಬಳ್ಳಿ, ಧಾರವಾಡ ಇತ್ಯಾದಿ ಪಟ್ಟಣಗಳ ಪ್ರವಾಸದಿಂದ ನಿರಾಶರಾಗಿ ಬಳ್ಳಾರಿ ಜಿಲ್ಲೆಯಲ್ಲಿಯೇ ಕೆಲವು ಮಟ್ಟಿಗೆ ಷೇರುಗಳನ್ನು ಸಂಗ್ರಹಿಸಿಲಾಯಿತು.

**ಹುಚ್ಚು ಬಿಡುಗಡೆ :–**

ರಾಘವಾಚಾರ್ಯರ ಸಹಾಯ ಕೇಳಿದೆವು, ಯಾಕೋ ಅವರಿಗೆ ಸರಿಯೆನಿಸಲಿಲ್ಲ. ಗೌಡರಿಗೆ ಇದ್ದ ಆಸೇಯು ನಿರಾಸೆಯಾಯಿತು, ಆದರೂ ಹೇಗಾದರೂ ಇತರ ಕಡೆಗಳಿಂದ ಹಣ ಶೇಖರಿಸಿ ಪಿಕ್ಚರ್ ಮಾಡುವ ಕಾರ್ಯದಲ್ಲಿ ನನಗಿಂತ ಡಾಕ್ಟರ್‌ರು ಕೆಚ್ಚೆದೆಯಿಂದ ಮುಂದುವರಿದರು. ಎಲ್ಲೆಲ್ಲಿಯೂ ನಿರುತ್ಸಾಹದ ವಾತಾವರಣದಿಂದ ಗೌಡರಿಗಂತೂ ಬೇಜಾರಾಗಿತ್ತು, ಆದರೂ ಯತ್ತಿಸುತ್ತಿದ್ದೆ. ಈ ಷೇರುಗಳಿಗಾಗಿ ರಾಮಸಾಗರದಲ್ಲಿ ನಾಟಕವಾಡುವ ಪೇಚಿಗೆ ಸಿಕ್ಕು ಮೈ ಮುಪ್ಪಾಗಿ ಬರಿಗೈಯಿಂದ ಬಂದರು, ಗೌಡರ ಸ್ನೇಹಿತರಾದ ಡಾಕ್ಟರರು ಊಹೆಗಳು ಚಂದ್ರಲೋಕಕ್ಕೆ ಮುಟ್ಟುವಂತಿದ್ದವು, ತನ್ನ ಉದ್ಯೋಗವನ್ನು ಬಿಟ್ಟರು ಸದಾ ಸಿನಿಮಾ ಕಂಪನಿಯ ಯೋಚನೆ ದಿಟ್ಟತನದ ಅಚಲ ಶ್ರದ್ಧೆಯು ಒದಗಿ ಬರುತ್ತಿದ್ದ ನಿರಾಶೆಯನ್ನು ಲೆಕ್ಕಿಸುತ್ತಿರಲಿಲ್ಲ. ಸಹಸಮಯವಾದ ಈ ಕಾರ್ಯ ಪ್ರವೃತ್ತಿಯಲ್ಲಿ ಹಗಲಿರುಳು ದುಡಿಯುತ್ತಿದ್ದುದರಿಂದ ನಿಮೋನಿಯ ಜ್ವರದಿಂದ ಮಲಗಿ ಬಿಟ್ಟರು. ಜ್ವರದಲ್ಲಿಯೂ ಫಿಲಂ ಕಂಪನಿಯ ಪೇಚಾಟ ಬಂದ ಜ್ವರ ಬಿಡಲಿಲ್ಲ. ಕೊನೆಗೆ ಅದೇ ಪೇಚಾಟದಲ್ಲಿ ದಿವಂಗತರಾದರು, ಗೌಡರ ದುಃಖವು ಮೇರೆ ಮೀರಿತು. ಮುಂದಿನ ಫಿಲಂ ಕಂಪನಿಯ ಗತಿಯೇನು? ನಡೆಯಿಸುವುದೇ? ಬಿಡುವುದೇ? ಎಂಬ ಚಿಂತೆ ಬಲವಾಯಿತು, ವಕೀಲರಾದ ರೂಪನಗುಡಿ ನಾರಾಯಣರಾಯರು ಕಂಪನಿಯಲ್ಲೊಬ್ಬ ಡೈರೆಕ್ಟರರು, ಅವರೊಂದಿಗೆ ಯೋಚಿಸಿ ಡೈರೆಕ್ಟರರ ಸಮಾವೇಶಗೊಳಿಸಿ ಎಲ್ಲರ ಅಬಿಪ್ರಾಯದಂತೆ ಕಂಪನಿ ಮುಚ್ಚವುದೇ ಯೋಗ್ಯವೆಂದಾದುದರಿಂದ, ಷೇರುದಾರರ ಹಣ ಹಿಂದಿರುಗಿಸಿದ್ದೆ ಚಿತ್ರಪಟ ಮಾಡಿದಂತೆ ಎಂಬ

ಪ್ರಾಮಾಣಿಕ ಸಂತೋಷ ಗೌಡರಿಗೆ ಆಯಿತು. 15-05-1939 ರಲ್ಲಿ ಪ್ರಾರಂಭವಾದ ಸಿನಿಮಾ ವ್ಯವಸಾಯ ವಿಫಲಗೊಂಡು ಡಾಕ್ಟರರನ್ನು ಬಲಿಗೊಂಡು 1940 ರಲ್ಲಿ ಮುಕ್ತಾಯವಾಯಿತು.

**ಸಿನಿಮಾದಲ್ಲಿ ಹಿನ್ನಲೆ ಗಾಯಕ :-**

ಶಾಂತೇಶ ಪಾಟೀಲರಿಂದ 'ಚಂದ್ರಹಾಸ' ಚಿತ್ರಪಟದ ನಿರ್ಮಾಣವು ಕೊಲ್ಲಾಪುರದಲ್ಲಿ ಸಾಗಿತ್ತು. ಈ ಮುಂಚೆ ಅವರು ಬಳ್ಳಾರಿಗೆ ಬಂದು ಗೌಡರೊಂದಿಗೆ ಮಾತಾಡಿ ಹೋಗಿದ್ದರು. ಈಗ ಅವರ ಕರೆ ಬಂದಿದ್ದರಿಂದ ಗೌಡರೊಂದಿಗೆ, ಮಿತ್ರರೊಂದಿಗೆ ಹೋದೆ, ಅವರ ವ್ಯವಸ್ಥಿತ ಆಚರಣೆಯಲ್ಲಿ ಊರು ಮರೆಯುವಂತಾಯಿತು. 'ಚಂದ್ರಹಾಸನ' ಪ್ರಾರ್ಥನೆಯ ರಿಕಾರ್ಡು ಆಗಲಿಲ್ಲ. ಕೇಳಿದಾಗ "ಯಾಕೆ ಏನವಸರ ಹಾಯಾಗಿದ್ದು ಬಿಡಿ ಕೊನೆಗೆ ಮಾಡೋಣ"ವೆಂದು ಬಹು ಸಮಾಧಾನದಿಂದ ಅರ್ಧ ನಿಮೀಲಿತ ನೇತ್ರರಾಗಿ ಅಂದು ಬಿಡುತ್ತಿದ್ದರು. ಅವರ ಸಿನಿಮಾ ಷೂಟಿಂಗಿಗೂ ಹೋಗಿ ಬರುತ್ತಿದ್ದರು. ಸಾಕಾದಾಗ ರೈಲ್ವೇ ಸ್ಟೇಷನ್ನಿಗೆ ಹೋಗಿ ಬರುತ್ತಿದ್ದರು. ಬಹು ಸುಂದರವಾದ ಪ್ರದೇಶ. ಔಟ್‌ಡೋರ್ ಷೂಟಿಂಗಿಗಾಗಿ ಪನ್ಹಾಳಗಡಕ್ಕೆ ಒಂದು ಸಲ ಹೋಗಿದ್ದರು. ಅಲ್ಲಿಯ ಪ್ರಕೃತಿ ರಮ್ಯ ಸೌಂದರ್ಯಕ್ಕೆ ಮುಗ್ದನಾದರು. ಚರಿತ್ರೆಯಲ್ಲಿ ಮಹಾವೀರನೆಂದು ಪರಿಗಣಿತನಾದ ಶಿವಾಜಿಯು ತನ್ನ ಮಾವಳೇ ಭಟರ ಸೈನ್ಯವನ್ನು ಇಲ್ಲಿಯೇ ಮೊದಲು ಕಟ್ಟಿದ್ದು. ಆ ಘಟನೆಯು ನೆನಪಾಗಿ ಉತ್ತೇಜಿತನಾದರು ಪಾಟೀಲರು ಅಲ್ಲಿಯ ಸುಂದರ ದೃಶ್ಯಗಳನ್ನು ಅವರ ಚಿತ್ರಪಟಕ್ಕೆ ಅಳವಡಿಸಿಕೊಳ್ಳುವುದರಲ್ಲಿ ಮಗ್ನರಾಗಿದ್ದರು ಗೌಡರು ಅಲ್ಲಿಯ ಇತಿಹಾಸ ಪ್ರಸಿದ್ಧ ಸ್ಮಾರಕಗಳನ್ನು ನೋಡುವುದರಲ್ಲಿ ಮಗ್ನರಾಗಿದ್ದರು. ಈ ಹಿಂದೆ ಪೂರ್ವ, ದಕ್ಷಿಣ ಭಾಗಗಳ ಕರೆಮಲೆ-ಕೆಂಪು ಮಲೆಗಳನ್ನು ನೋಡಿದ್ದ ಗೌಡರು ಈ ಪಶ್ಚಿಮದ ಅರಾವಳೀ ಪರ್ವತಗಳ ಸೌಂದರ್ಯಕ್ಕೆ ಮೋಹಿತನಾದರು.

ಕೊಲ್ಲಾಪುರದಲ್ಲಿ ಎರಡು ವಾರಗಳು ಅದು-ಇದು ಏನೇನೋ ನೋಡುವುದಾಯಿತಾಗಲೀ ರಿಕಾರ್ಡು ಆಗಲಿಲ್ಲ, ಗೌಡರ ಬಲವಂತಕ್ಕೆ ಪಾಟೀಲರು ಅಲ್ಲಿಯ ವಾದ್ಯಗಾರರನ್ನು ಜೋಡಿಸಿಕೊಟ್ಟು ಅಭ್ಯಾಸಕ್ಕೆ ಅನುವು ಮಾಡಿಕೊಟ್ಟರು. ಮೂರು ನಾಲ್ಕು ದಿನ ಅಭ್ಯಾಸವು ನಡೆಯಿತು. ಗೌಡರ ಆನಂದ ಭೈರವಿಯ ಪ್ರಾರ್ಥನೆಗೆ ಅಲ್ಲಿಯ ವಾದ್ಯಗಾರರು ಭೀಮ್ ಪ್ಲಾಸ್‌ರಾಗದ ಛಾಯೆಗಳನ್ನು ನುಡಿಸುತ್ತಿದ್ದುದರಿಂದ ಹೇಗಪ್ಪಾ ಇದು ಎಂಬ

ಪೇಜಾಟಕ್ಕಿಟ್ಟು ಕೊಂಡಿತು. ಅಲ್ಲಿ ಕರ್ನಾಟಕ ಸಂಗೀತಬಲ್ಲ ವಾದ್ಯಗಾರರಿರಲಿಲ್ಲ. ಮ್ಯಾನೆಜರ್ ಡೈರೆಕ್ಟರ್‌ರಾದ ಮಲ್ಲಿಕಾಜುನ ಮನ್ಸೂರರು ಬರಲಿಲ್ಲ. "ಎಲ್ಲಾ ನೀವೇ ನೋಡಿಕೊಳ್ಳಿ" ಎಂದು ಪಾಟೀಲರು ಹೇಳಿ ಮತ್ತೆ ತಮ್ಮ ಸ್ಟುಡಿಯೋ ಕಾರ್ಯದಲ್ಲಿ ತೊಡಗಿದರು. ಈ ಪ್ರಾರ್ಥನೆಯಲ್ಲದೆ ಮುಕ್ತಾಯಕ್ಕೆ ಗ್ರೂಪ್‌ಸಾಂಗ್ ಗೌಡರೇ ಬರೆದು ಕೂಡಿಸಬೇಕಾಗಿತ್ತು. ಅದು ಶ್ರೀರಾಗದಲ್ಲಿ ಸಿದ್ಧವಾಯಿತು.

ಒಂದು ದಿನ ರಿಕಾರ್ಡು ಮಾಡಲಾಯಿತು. ಸರಿಯಾಗಿ ಬರಲಿಲ್ಲ. "ಇಲ್ಲಿ ಬೇಡ ಮುಂಬಾಯಿಗೆ ಹೋಗುವ" ಎಂದರು ಪಾಟೀಲರು, ಅಲ್ಲಿಗೆ ಊರು ಬಿಟ್ಟು ಹದಿನೈದು ದಿನಗಳ ಮೇಲಾಗಿತ್ತು. ಮತ್ತೆ ಈ ಬೊಂಬಾಯಿ ಇನ್ನೆಷ್ಟು ದಿನವೋ ಎಂದು ಎಲ್ಲರೂ ಹೊರಟರು. ಪಾಟೀಲರ ಔದಾರ್ಯ, ಶಾಂತಿ ಆದರದ ಗುಣಕ್ಕೆ ಮುಗ್ಧನಾದ ಗೌಡರು ಅವರಿಚ್ಛೆಯಂತೆಯಾಗಿ ರಿಕಾರ್ಡು ಕಾರ್ಯ 1947 ಜೂನ್‌ನಲ್ಲಿ ಮುಗಿಸಿಕೊಂಡು ಬರಲಾಯಿತು.

**ಸಿನಿಮಾನಾಟಕ :–**

ನಾಟ್ಯ ಕಲೆಯ ಉನ್ನತಿಯ ಬಗ್ಗೆ ಕಟ್ಟಿಕೊಂಡು ಗೌಡರ ಆದರ್ಶಗಳು ಎದ್ದಲ್ಲಿಯೇ ಬಿದ್ದುಹೋದವು. ಒಂದು ರೀತಿಯ ನವೀನತೆಯ ನೆಪದಿಂದ ರಂಗಾಲಂಕರಣಗಳು, ಬೆಳಕು– ಕತ್ತಲೆಗಳ ಬೆಡಗುಗಳು, ಅನಾದಶನ ಹಾಸ್ಯ, ಶೃಂಗಾರಗಳು, ಅಶ್ಲೀಲ ಸಾಹಿತ್ಯದೊಂದಿಗೆ, ವ್ಯಾಪಾರಿ ಮನೋಭಾವದ ಪ್ರಚಾರ ವೈಖರಿಗಳಿಂದ, ನಾಡಿನ ದೌರ್ಬಲ್ಯ ಮನೋಭಾವನೆ, ಜನತೆಯ ಅಭಿರುಚಿಯನ್ನು ಪ್ರಚೋದಿಸುವ ನಾಟಕಗಳು, ದಿನ ದಿನ ಪ್ರವರ್ಧಮಾನವಾಗಿ, ಪ್ರದರ್ಶನಗೊಳ್ಳುತ್ತಿರುವ ರೀತಿಗಳನ್ನು ಕಂಡು ಬೆರೆಗಾದರು.

ಯಾಂತ್ರಿಕ ಸಿನಿಮಾ ಕಲೆಯಿಂದ, ತತ್ತರಿಸಿ ಹೋದ ನಾಟ್ಯಕಲೆಯು ಕೆಲವು ಕಾಲ ಸುಪ್ತಾವಸ್ಥೆಯಲ್ಲಿದ್ದು ಪುನಶ್ಚೇತನ್ಯವನ್ನು ಪಡೆದು ಎದ್ದಾಗ ಸಾಕಷ್ಟು ಯಾಂತ್ರಿಕ ಸಿನಿಮಾ ಕಲೆಯನ್ನು, ತಮ್ಮ ನಾಟಕಗಳಲ್ಲಿ ಬಳಸಿಕೊಳ್ಳಲಾಗಿತ್ತು. ಜನ ಧನಾಕರ್ಷಣೆಗಾಗಿ, ಸಿನಿಮಾ ಪ್ರತಿಸ್ಪರ್ಧಿಯಾಗಿ ಸಾಗಿ ಬಂದ ನಾಟಕ ಸಂಸ್ಥೆಗಳು, ಒಂದು ರೀತಿಯ ಸಿನಿಮಾ ನಾಟಕಗಳಾಗಿ

ಪರಿವರ್ತನಗೊಂಡವು. ಯಾಂತ್ರಿಕ ಸಿನಿಮಾ ಕಲೆಯ ಚಾತುರ್ಯಕ್ಕೆ ಮನಸೋತು, ಜನರನ್ನು ತಮ್ಮ ಕಡೆ ಸೆಳೆಯುವ ಯತ್ನದಲ್ಲಿ ಕೆಲವು ಮಟ್ಟಿಗೆ ಯಶಸ್ವಿಗಳಾದವು.

ಸಿನಿಮಾನಗಳು ಎಷ್ಟೇ ಚಾತುರ್ಯ ಸೋಜಿಗಗಳಾದರೂ, ಜೀವ ಕಲೆಯಲ್ಲದ್ದರಿಂದ, ಅದರಲ್ಲಿಯೂ ಜನರಿಗೆ ಬೇಸರವಾಗುತ್ತಿದ್ದುದರಿಂದ, ಮತ್ತೆ ಈ ನವೀನ ರೀತಿಯ ಜೀವಂತ ಕಲೆಯ ನಾಟಕಗಳತ್ತ ತಿರುಗಿದರು, ಸಿನಿಮಾ ಕಲಾಸಕ್ತರಾದ ಜನತೆಯ ಆಕರ್ಷಣೆಗಾಗಿ, ಇಂದಿನ ನಾಟಕ ಸಂಘಗಳ ಯುಕ್ತಿ-ಯುಕ್ತ ತಂತ್ರವು, ರಂಗ ಭೂಮಿಗೆ ಪುನಶ್ಚೈತನ್ಯವನ್ನು ನಾಟಕ ಸಂಘಗಳು ಬಾಳುವ ಪ್ರಯತ್ನಗಳನ್ನು ಮಾಡಿಕೊಟ್ಟಿತು, ಸಿನಿಮಾ ಸ್ಪರ್ಧೆಯಲ್ಲಿ ಈ ರೀತಿಯ ಯುಕ್ತಿ ತಂತ್ರಗಳು, ಅನಿವಾರ್ಯವಾಗಿ ಮುಂದುವರಿದ ನಾಟ್ಯ ಕಲೆಯಲ್ಲಿ, ಅನುಭವಿಗಳ ನಾಟಕ ಸಂಘಗಳಲ್ಲಿ, ಅ ಪಕ್ವ ಬುದ್ಧಿಯ ನಟರು ಬೆರತು ಹೋಗುವ, ಸಾಕಷ್ಟು ಅವಕಾಶವು ದೊರೆಯಿತು, ಇದರಿಂದ ಉತ್ತಮವಾದ ನಾಟಕಗಳಿಗೂ, ನಟರಿಗೂ ಆಶ್ರಯವಿಲ್ಲದಾಯಿತು, ಅತ್ತ ಸಿನಮಾ ರಂಗದಲ್ಲಿ, ಇತ್ತ ನಾಟಕ ರಂಗದಲ್ಲಿಯೂ ಅವರಿಗೆ ಸ್ಥಾನವಿಲ್ಲದಾಯಿತು. ಬಳಕೆಯಲ್ಲಿ ಬಂದ, ಅನಾದಶನ ನಾಟಕಗಳೇ ಶ್ರೇಷ್ಠವೆಂಬ ಅನನುಭವಿಗಳಾದ ನಟರೇ ಉತ್ತಮ ನಟರೆಂಬ, ಭಾವನೆಯು ಮಾತ್ರ ಸಾಮಾನ್ಯ ಜನರಲ್ಲಿ ಬೆಳೆಯುವಂತಾಯಿತು.

ಕಾಲ ಕ್ರಮಾಣುಗತವಾಗಿ ಬೆಳೆದ ಈ ಬೆಳವಣಿಗೆಯು, ನಾಟಕ ರಂಗಕ್ಕಿಂತ ಸಿನಿಮಾರಂಗದ ನಟ-ನಟೀ ಮಣಿಗಳು, ಇಂದಿನ ತರುಣ ಪೀಳಿಗೆಯ ಆರಾಧ್ಯ ದೇವತೆಗಳಾದುದು ಪರಮಾಶ್ಚರ್ಯ! ದೇಶದ ದುರದೃಷ್ಟದಿಂದ ಈ ಭಾವನೆಯು ಮುಂದುವರಿಯುವುದಾದರೆ, ಯಾವ ಶ್ರೇಷ್ಠತೆಯ ಆದರ್ಶ ಕಲೆಗಳು ನಮ್ಮಲ್ಲಿ ಉಳಿಯಲಾರವು, ರೋಗ ನಿರೋಧಕ ಶಕ್ತಿಯನ್ನು ಕಳೆದುಕೊಂಡು ದೇಹದಂತೆ ದೇಶವೂ ದುರ್ಬಲವಾಗುವುದು, ದೇಹದ ಅಂಗಾಂಗಗಳ ಪುಷ್ಠಿ ತುಷ್ಠಿ ಸುಸಂಸ್ಕೃತಿಕ ಬಾಳಿಗೆ ಶುದ್ಧ ಕಲೆಗಳು ಅಷ್ಟೇ ಮುಖ್ಯ.

ನಮ್ಮ ದೇಶದ ಪ್ರಾಚೀನ ರಸ ಋಷಿಗಳು ನಡೆಸಿಕೊಂಡು ಒಂದು, ಲಲಿತ ಕಲೆಗಳು ಕೇವಲ ಬಹಿಃ ಸೌಂದರ್ಯಕ್ಕಲ್ಲದೆ, ಆತ್ಮ ಸೌಂದರ್ಯ ವಿಕಾಸಕ್ಕಾಗಿ ಬಳಸಿಕೊಳ್ಳುವ, ಶಾಸ್ತ್ರೀಯ ಮಾರ್ಗವನ್ನು, ಜೀವಿಗಳ ಉದ್ಧಾರದ ಕ್ರಮವನ್ನು ಬೋಧಿಸುವ, ಉದಾತ್ತ ಉದ್ದೇಶಗಳಿಂದ ಕೂಡಿವೆ. ಈ ಉದ್ದೇಶಗಳನ್ನು ಕೇವಲ ಅತಿ ರಂಜನೆಯ ಮನೋಪ್ರವೃತ್ತಿಯಲ್ಲಿ ಉಲ್ಲಂಘಿಸಿದರೆ, ನಮ್ಮದೆಲ್ಲವನ್ನೂ ಕಳೆದುಕೊಂಡು, ಮಾನವತ್ವದಿಂದ ಜಾರಿ, ಪಶು ವೃತ್ತಿಗಿಳಿದು ಬಾಳುವಂತಾಗುತ್ತದೆ. ಅಷ್ಟೇ ಅಲ್ಲ ಪಾಶವೀವೃತ್ತಿಯನ್ನು ಬೆಳೆಸಿದಂತಾಗುತ್ತದೆ, ಇಂತಹ ಆಶಯಗಳಿಗೆ ಅನುಗುಣವಾಗಿ, ಆಂಧ್ರ ಮತ್ತು ಕರ್ನಾಟಕ ರಂಗ ಭೂಮಿಯಲ್ಲಿ ಸಲ್ಲಿಸಿದ ಗೌಡ ಸೇವೆಯು, ಇಂದಿನ ಬದಲಾವಣೆಯ ರಂಗ ಭೂಮಿಗೆ ಹೊಂದಿಕೊಳ್ಳುವುದು ಸಾಧ್ಯವೇ? ಎಂಬ ಯೋಚನೆಯು ರಂಗಭೂಮಿಗೆ ದೂರವಾಗಿರಿಸಲು ಯತ್ನಿಸಿತು, ಕೆಲವು ನಾಟಕ ಸಂಘಗಳ ಪ್ರದರ್ಶನಗಳನ್ನು ನೋಡಿ ಜಿಗುಪ್ಸೆಯುಂಟಾಯಿತು.

**4.3 ರಾಘವ ಕಲಾ ಮಂದಿರ ಸ್ಥಾಪನೆ ಮತ್ತು ಪರಿಷತ್ತುಗಳು**

ಅಂದು ಬಹು ವಿಶ್ವಾಸಿಗಳಾದ ಜಿಲ್ಲಾ ನ್ಯಾಯಾಧಿಪತಿಗಳು 'ಮ್ಯಾಕ್' ಅವರು ಜಿಲ್ಲಾ ಕಲೆಕ್ಟರರಾದ ಅನಂತ ರಾಮನ್ ಇವರ ಸಹಾಯದಿಂದ ರಾಘವರ ಸ್ಮಾರಕ ನಾಟ್ಯ ಭವನಕ್ಕಾಗಿ ಕಮಿಟಿಯನ್ನು ರಚಿಸಿ ಕಾರ್ಯ ಮುಂದುವರಿಸಲಾಯಿತು. ಇದರ ಕಾರ್ಯದರ್ಶಿಗಳಾಗಿ ಶ್ರೀ ಭೌಯಪ್ಪನವರು, ನಿಪ್ಪಾಣಿ ವೆಂಕಟರಾಯರು ತುಂಬಾ ಶ್ರಮ ಪಡುತ್ತಿದ್ದರು. ಈಗ್ಲೆಯ ಹಲವಾರು ಮುಖ್ಯ ಸ್ಥಳಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿ ಸುಮಾರು 10,000 ಕ್ಕೂ ಮೇಲ್ಪಟ್ಟು ನಿಧಿಕೂಡಿಸಲಾಯಿತು. ಆದರೆ ಇಷ್ಟರಿಂದ ನಾಟ್ಯಭವನ ನಿರ್ಮಾಣ ನಡೆಯಲು ನಮ್ಮ ಕಮಿಟಿಯವರು ಒಪ್ಪಲಿಲ್ಲ. ಹೆಚ್ಚಿನ ನಿಧಿ ಕೂಡಿಸಲಾಗದೆ ದಿನಗಳುರುಳುತ್ತಿದ್ದವು.

ಒಂದಂಕಕ್ಕೆ ನಿಂತ 'ಕ್ರಾಂತಿ ಪುರುಷ ಬಸವಣ್ಣ' ನಾಟಕ ಮುಂದೆ ಸಾಗಲಿಲ್ಲ. ಬಹು ಪ್ರಯತ್ನಪಟ್ಟು ಬರೆಯಲು ಕೂತಾಗ ರಾಘವರ ನೆನಪಾಗಿ 'ಹೋಗಲಿ ಅವರು ಹೋದ ಮೇಲೆ ಈ ನಾಟಕದಿಂದೇನು? ಕಷ್ಟಪಟ್ಟು ಬರೆದರೆ ಆಡುವವರಾರು' ಎಂದು ಸುಮ್ಮನಾಗಿ ಬಿಡುತ್ತಿದೆ. ಹೀಗೆ ಆರು ತಿಂಗಳು ಕಳೆದವು. ಆ ಕಡೆ ರಾಘವ ಸ್ಮಾರಕ ಕಮಿಟಿಯ ಕೆಲಸಗಳು ಅರ್ಧಕ್ಕೆ ನಿಂತವು. ಇಲ್ಲಿ ನಾಟಕವು ಒಂದಕ್ಷರವೂ ಸಾಗದೆ ನಿಂತುಬಿಟ್ಟಿತು. ಈ ಸಮಯದಲ್ಲಿ ನಾನು

ಸುಖಿಯಾಗಿರಲಿಲ್ಲ. ರಾಘವರ ಅಗಲಿಕೆಯು ನನ್ನ ಕಲಾ ಜೀವನದ ಮೇಲೆ ದೊಡ್ಡ ಆಘಾತವನ್ನುಂಟು ಮಾಡಿತು.

**ಜನಪದ ಗೀತಾ ಪರಿಷತ್ತು.**

ಕರ್ನಾಟಕದ ಕೇಸರಿ ವಾಲಿ ಚೆನ್ನಪ್ಪನವರು ನಮ್ಮ ಸಂಗಡಿಗರೊಂದಿಗೆ ಗೋಕಾಕಿನಲ್ಲಿ 1947ರಲ್ಲಿ ದೊಡ್ಡ ರೈತ ಸಮ್ಮೇಳನವನ್ನು ಕರೆದಿದ್ದರು. ಅದರಲ್ಲಿ ಜನಪದ ಗೀತಾ ಪರಿಷತ್ ನಡೆಯಿಸುವ ಕಾರ್ಯ ತಲ್ಲೂರು ರಾಯನ ಗೌಡರು ಏರ್ಪಡಿಸಿದ್ದರು. ಅದರ ಅಧ್ಯಕ್ಷನಾಗಿ ಅಲ್ಲಿಗೆ ಹೋಗಿದ್ದೆ. ವಾಲಿಯವರಿಗೆ ಸಣ್ಣ ಕೆಲಸ ಮಾಡಲು ಬರುತ್ತಿರಲಿಲ್ಲ. ಅವರ ಹೆಸರಿಗೆ ತಕ್ಕಂತೆ ಯಾವ ಕಾರ್ಯವಾದರೂ ಅದು ನಾಡಿದೊಂದು ಅಚ್ಚರಿಯಾಗುತ್ತಿತ್ತು. ಯಾರನ್ನಾದರೂ ಅನುಕರಿಸಬಹುದಾಗಿತ್ತಾಗಲಿ ವಾಲಿಯವರ ಅನುಕರಣೆ ಮಾಡಲು ಇಂದಿಗೂ ಯಾರಿಗೂ ಸಾಧ್ಯವಾಗಿಲ್ಲ. ಅನನುಕರಣೀಯ, ಧೀರೋದಾತ್ತತೆಯಲ್ಲಿ ನೆರೆದ ರೈತ ಪರಿಷತ್ತು 'ನಭೂತೋ ನಭವಿಷ್ಯತಿ' ಎಂಬಂತಾಯಿತು. ಅದರಲ್ಲಿ ನಮ್ಮ ಜನಪದ ಗೀತಾ ಪರಿಷತ್ ಬೆಳೆತನಕ ನಡೆಯಿತು. ಇಲ್ಲಿಯ ಅಧ್ಯಕ್ಷಭಾಷಣ ನನ್ನದು. ಮಾತಾಗಿರಲಿಲ್ಲ, ಹಾಡಾಗಿತ್ತು.

ಅಕ್ಕತಂಗೇರೆ ಅಣ್ಣತಮ್ಮಂದಿರೆ
ಶರಣೆಂಬೆ ನಾನು ಶರಣೆಂಬೆ
ಈ ದೊಡ್ಡ ಸಭೆಯಾಗ ದಡ್ಡನಾದೆನ್ನನು
ದೊಡ್ಡಗದ್ದಿಗೆಯಿತ್ತು ಕೂಡಿಸಿದ ನಿಮಗೆಲ್ಲ ॥1॥

ಮಾತು ಕೇಳಿ ಕೇಳಿ ಬೇಸತ್ತ ಜನರಿಗೆ ಇದು ಹಿಡಿಸಿದ್ದರಿಂದ ಅಧ್ಯಕ್ಷತೆಗೆ ಗೌರವವು ಸಿಕ್ಕಿತು. ಅಂತಹ ಪರಿಷತ್ತನ್ನು ಮತ್ತೆ ನಾನು ಕನ್ನಡ ನಾಡಿನಲ್ಲಿ ಕಾಣಲಿಲ್ಲ.

**ಬಳ್ಳಾರಿ ಜಿಲ್ಲಾ ಕನ್ನಡ ನಾಟಕ ಕಲಾ ಪರಿಷತ್ತು**

ಒಂದು ವರುಷದಿಂದ ಜ್ವರದಿಂದ ಆಗಾಗ ಮಲಗುತ್ತಿದೆ. ಬಾಲ್ಯದಿಂದಲೂ ನಾನಷ್ಟು ಆರೋಗ್ಯವಂತನಲ್ಲ. ಯಾವ ಬೇನೆ ಯಾವ ಕಾಲದಲ್ಲಿ ಏನಾಗಿಕಾಡಿದರೂ ಅದನ್ನು ಮೆಟ್ಟಿ ಡಾ॥ ದೊಡ್ಡನಗೌಡ ಕಲೆಯು ಮುಂದುವರಿಯುತ್ತಿತ್ತು. ಸಿಡಿಗಿನಮಳೆ ಚಂದ್ರಯ್ಯನವರು ನಮ್ಮ ಪ್ರಾಂತ್ಯದ ನಾಟಕ ಕಲೆಯಲ್ಲಿ ಸುಧಾರಣೆಯನ್ನು ತರುವ ಯತ್ನಕ್ಕಾಗಿ ದೊಡ್ಡನಗೌಡರನ್ನು ಕಾಡಹತ್ತಿದರು. ಜ್ವರ ತಪ್ತಕಾಯ ಬಳಲಿ ಬಲಗುಂದಿತ್ತು. ಶ್ರಮದಾಯಕ ಕಾರ್ಯಗಳನ್ನು ಪ್ರವಾಸಗಳನ್ನು ಕೈಗೊಳ್ಳುವಂತಿರಲಿಲ್ಲ. ಉದಯೋನ್ಮುಖನಾದ ಚಂದ್ರಯ್ಯನವರ ಈ ಬಯಕೆಯನ್ನು ಕಡೆಗಣಿಸುವಂತಿರಲಿಲ್ಲ. ಅಷ್ಟೊತ್ತಿಗಾಗಲೆ ನಮ್ಮ ಜಿಲ್ಲೆಯಲ್ಲಿ ದೊಡ್ಡನಗೌಡರವರ ನಾಟಕ ಕಲೆಯಿಂದ ಮುಂದುವರಿದಿದ್ದರು. ಓದಿದವರಲ್ಲ. ಓದಿಕೊಳ್ಳುವಷ್ಟು ಓದು ಮಾತ್ರ. ದೊಡ್ಡನಗೌಡರ ಬಳಿಯಲ್ಲಿ ಹಲವಾರು ವರುಷ ನಾಟಕಗಳಲ್ಲಿ ಗಳಿಸಿಕೊಂಡ ಅನುಭವದಿಂದ ಸ್ವತಃ ನಾಟಕ ಸಂಘದಿಂದಲೂ ನಾಡಿನ ಸಂಘಗಳಲ್ಲಿ ವಹಿಸುತ್ತಿದ್ದ ಪಾತ್ರಗಳಿಂದಲೂ, ಹೆಚ್ಚಾಗಿ ಹಳ್ಳಿಯ ಸಂಘಗಳಲ್ಲಿ ನಾಟಕ ಕಲಿಸುವ ಉದ್ಯೋಗಿಯಾಗಿದ್ದ. ಚಿಕ್ಕವಯಸ್ಸಿನಿಂದಲೂ ಸಾಹಸಮಯ ಜೀವನದಲ್ಲಿ ತೇಲಿ – ಮುಳುಗಿ ಎದ್ದು ಬಂದಿದ್ದ. ಈತನ ಕೆಚ್ಚಿನ ಕಲಾ ಜಿಜ್ಞಾಸೆಗಾಗಿ ದೊಡ್ಡನಗೌಡರು ಮೆಚ್ಚಿ ಪ್ರೀತಿಸುತ್ತಿದ್ದರು.

ನಮ್ಮ ಬಳ್ಳಾರಿ ಜಿಲ್ಲೆಯ, ಅದರಲ್ಲಿಯೂ ಹಳ್ಳಿಗಳು ನಾಟ್ಯಕಲೆಗಾಗಿ ತಮ್ಮ ಶಕ್ತಿಮೀರಿ ವೆಚ್ಚಮಾಡುತ್ತಿದ್ದವು. ಸುಗ್ಗಿಯ ತರುವಾಯಸ ದೊರೆತ ವೇಳೆಯ ನಾಟಕಕ್ಕಾಗಿಯೇ ಮುಡುಪಾಗಿಡುತ್ತಿದ್ದ ಅನೇಕ ಹಳ್ಳಿಗಳು ಇದ್ದವು. ಜಿಲ್ಲಾ ಕೇಂದ್ರದಲ್ಲಿಯೂ ಇಲ್ಲದ ಕಲಾ ಚಟುವಟಿಕೆಗಳು ಹಳ್ಳಿಗಳಲ್ಲಿ ನಡೆಯುತ್ತಿದ್ದವು ಹೊಳಗುಂದಿ, ಹಿರೇಹಾಳು ಗ್ರಾಮಗಳಲ್ಲಿ ನಾಟ್ಯಭವನಗಳು ನಿರ್ಮಾಣವಾಗಿ ಅಲ್ಲಿಯವರು ಪ್ರತಿವರುಷ ತಮ್ಮ ನಾಟಕ ಸಂಘಗಳಿಂದ ಅನೇಕ ಪ್ರದರ್ಶನಗಳಿತ್ತು ಸಿದ್ಧವಾಗಿದ್ದವು. ಆದರೆ ಕಲಾಭಿವೃದ್ಧಿಗೆ ಆ ವೇಳೆ – ಆ ವೆಚ್ಚಗಳು ಅಷ್ಟೊಂದು ಉಪಯೋಗಕಾರಿಗಳಾಗಿರಲಿಲ್ಲ. ಇದನ್ನು ದೊಡ್ಡನಗೌಡರು ನಮ್ಮ ಗ್ರಾಮದಲ್ಲಿ ನಡೆದ ನಾಟ್ಯಸಂಘಗಳ ಅನುಭವದಿಂದ ತಿಳಿದಿದ್ದೆ. ಕಲೆಯಲ್ಲಿ ಕೇವಲ ರಂಜನೆಯನ್ನು ಮಾತ್ರ ಗ್ರಹಿಸಿದ್ದ ಹಳ್ಳಿಗರಿಗೆ ಆ ರಂಜನೆಯಲ್ಲಿ ಕಲೆಯ ಪೂಜ್ಯತೆಯನ್ನು ಅದರ ಉಪಾಸನೆಯನ್ನು ಹಾಗೂ ಉನ್ನತಿಯನ್ನು ಪರಿಚಯ ಮಾಡಿಕೊಡುವ ಕಾರ್ಯ ನಡೆದಿರಲಿಲ್ಲ.

ಈ ಕಾರ್ಯ ಒಬ್ಬರು ಮಾಡಲು ಸಾಧ್ಯವಿರಲಿಲ್ಲವಾದ್ದರಿಂದ ನಾಡಿನ ಕೆಲವು ಶ್ರದ್ಧಾವಂತ ಕಲಾವಿದರ, ಮತ್ತು ಕಲಾಪೋಷಕರನ್ನು ನಮ್ಮೂರಿನಲ್ಲಿಯೇ ಕೂಡಿಸಿ ಕಲೆಯ ಪುರೋಭಿವೃದ್ಧಿಗಾಗಿ ಒಂದು ಸಂಘವನ್ನು ಸ್ಥಾಪಿಸಿ ಆ ಸಂಘದದ್ವಾರಾ ಜಿಲ್ಲೆಯಲ್ಲಿ ಪ್ರಚಾರ ಕಾರ್ಯ ಕೈಗೊಳ್ಳಲು ಮತ್ತು ಅದಕ್ಕಾಗಿ ತಕ್ಕ ಸಾಹಿತ್ಯ ಪ್ರಕಟನೆಗಳನ್ನು ಹೊರಡಿಸಲು ಇತ್ಯಾದಿ ಕಾರ್ಯಗಳ ಬಗ್ಗೆ ಚರ್ಚೆಯಾಗಿ 'ಬಳ್ಳಾರಿ ಜಿಲ್ಲಾ ಕನ್ನಡ ನಾಟಕ ಕಲಾಪರಿಷತ್ತು' 02-09-1948ರಲ್ಲಿ ಸ್ಥಾಪಿಸಲಾಯಿತು. ಆ ಸಂಘದ ಅಧ್ಯಕ್ಷನಾಗಿ ದೊಡ್ಡನಗೌಡ, ಉಪಾಧ್ಯಕ್ಷರಾಗಿ ಚಿಂತಕುಂಟೆ ವೀರಭದ್ರಪ್ಪನವರೂ, ಪ್ರಧಾನಕಾರ್ಯದರ್ಶಿಗಳಾಗಿ ವೈ. ಯಂ. ಚಂದ್ರಯ್ಯನವರು ಸಹಾಯ ಕಾರ್ಯದರ್ಶಿಗಳಾಗಿ ಶಿ.ವ. ಚನ್ನಬಸವೇಶ್ವರ, ಕುಮಾರಸ್ವಾಮಿ ಇವರು ಇರಲು ಪ್ರಾರಂಭದಲ್ಲಿ ನಿರ್ಣಯಿಸಲಾಯಿತು.

**ಜೋಳದರಾಶಿಯಲ್ಲಿ ಪ್ರಥಮ ಪರಿಷತ್ತು**

ಪ್ರಕಟನೆ – ಪ್ರಚಾರಗಳಿಂದ ನಾವು ಕೈಕೊಂಡ ಪರಿಷತ್ತಿನ ಉದ್ದೇಶಗಳನ್ನು ದೊಡ್ಡನಗೌಡರ ಪ್ರಾಂತದಲ್ಲಿ ಸಾರಿದೆವು. ಸುಪ್ರಸಿದ್ಧರಾದ ಹಿರಿಯ ನಾಟ್ಯ ಕಲಾವಿದರಿಂದ ಪರಿಷತ್ತು ನಮ್ಮ ಕಾರ್ಯೋತ್ಸಾಹಕ್ಕೆ ಕಲಾ ಜಾಗೃತಿಗೆ ಮೊದಲು ಚಿಕ್ಕಹಳ್ಳಿಯಾದ ಜೊಳದರಾಶಿಯಲ್ಲಿಯೇ ಪ್ರಥಮ ಪರಿಷತ್ತು ನಡೆಯಿಸಲು ಕಲಾ ಪರಿಷತ್ತು ತೀರ್ಮಾನಿಸಿತು. ಇವೆಲ್ಲಾ ನಮಗೆ ಹೊಸದು. ಆದರೂ ಸಾಧಿಸಬೇಕೆಂಬ ಹಳ್ಳಿಯ ಸ್ವಭಾವದ ಕೆಚ್ಚು. ಚಂದ್ರಯ್ಯನವರು, ವೀರಭದ್ರಪ್ಪನವರು, ಕುಮಾರಸ್ವಾಮಿಯವರು, ಶಿ.ವ. ಚನ್ನಬಸವೇಶ್ವರರು ಪರಿಷತ್ತಿನ ಕಾರ್ಯಗಳಲ್ಲಿ ಹುಮ್ಮಸ್ಸಿನಿಂದ ತೊಡಗಿದರು. ಜಿಲ್ಲೆಯಲ್ಲಿ ಪರಿಷತ್ತಿಗಾಗಿ ಸಾಕಷ್ಟು ಚಂದಾಹಣವು ಕೂಡಿತು. ದೊಡ್ಡ ದೊಡ್ಡ ಶ್ರೀಮಂತರು ಕಲಾವಿದರು, ಕಲಾಭಿಮಾನಿಗಳು ಮುಕ್ತ ಹಸ್ತದಿಂದ ನೆರವು ನೀಡಿದ್ದರಿಂದ ನಮ್ಮ ಕೆಲಸ ಸುಲಭವಾಯಿತು. ಆಧುನಿಕವಾದ ಯಾವ ಅನುಕೂಲ ಸಲಕರಣೆಗಳ ನೆರವಿಲ್ಲದ ಹಳ್ಳಿಯಲ್ಲಿ ಪರಿಷತ್ತಿನಂಥ ದೊಡ್ಡ ಕಾರ್ಯ ಹಮ್ಮಿಕೊಂಡದ್ದು, ಅದರ ಯಶಸ್ಸಿಗಾಗಿ ಕೆಲಸ ಮಾಡುವ ಧೃತಿಯು ಮೊಟ್ಟ ಮೊದಲಿಗೆ ನಮ್ಮ ಪಾಲಿಗೆ ಬಂದಿತ್ತು. ಅದನ್ನು ನಿರ್ವಹಿಸಿ ತೋರಿಸಬೇಕಾದ ಆದರ್ಶತೆಯ ಭಾರವು ನಮ್ಮ ಮೇಲಿತ್ತು. ನಾಟಕಾಲಂಕಾರ ಅಭಿನಯಕೇಸರಿ ಗರುಡ ಸದಾಶಿವರಾಯರು ಈ ಪರಿಷತ್ತಿನ

ಅಧ್ಯಕ್ಷತೆ ವಹಿಸಲು, ವಿನೋದ ರತ್ನಾಕರ ಗುಬ್ಬಿ ವೀರಣ್ಣನವರು ಉದ್ಘಾಟಿಸಲು ಒಪ್ಪಿ ಬಂದದ್ದರಿಂದ ನಮ್ಮ ಹಳ್ಳಿಗಳಿಗೆ ರೆಕ್ಕೆ ಬಂದಂತಾಗಿತ್ತು.

ಪರಿಷತ್ತಿನ ಅಂಗವಾಗಿ ವಿವಿಧ ವಿನೋದಾವಳಿಗಳ ಏರ್ಪಾಟು ಆಯಿತು. ಅದರ ಭಾರ ಹಿರಿಯ ನಟರಾಜ ಬಳ್ಳಾರಿಯ ಬಾದನಹಟ್ಟಿ ಶ್ರೀನಿವಾಸರಾಯರು ವಹಿಸಿಕೊಂಡರು. ಅಧಿವೇಶನದ ಏರ್ಪಾಡುಗಳು ಹಗಲಿರುಳು ಬಿಡುವಿಲ್ಲದೆ ನಡೆದವು. ಜಿಲ್ಲೆಯ ಪ್ರಮುಖರು, ಕರ್ನಾಟಕದ ಇತರ ಜಿಲ್ಲೆಯ ಕಲಾವಿದರು, ಪತ್ರಿಕಾಪ್ರತಿನಿಧಿಗಳು, ವಾದ್ಯಕಾರರು, ಗುಂಪು ಗುಂಪಾಗಿ ನೆರೆದು ಬಂದು ಸೇರಿದವರಿಗೆ ತಮ್ಮ ತಮ್ಮ ಮನೆಗಳಲ್ಲಿ ಹಳ್ಳಿಯವರು ಬಂದವರಿಗೆ ವಸತಿ ನೀಡಿದ್ದರು. ಗುಡಿ–ಗುಂಡಾರ ಇತ್ಯಾದಿ ಏನಿದ್ದರೂ ಅಲ್ಲಲ್ಲಿ ಇಳಿಯುವ ಏರ್ಪಾಟು, ಅವರನ್ನು ಕರೆತರುವ ಆದರಿಸುವ ಇತ್ಯಾದಿ ಕಾರ್ಯಗಳಲ್ಲಿ ಸಿಡಗಿನಮೊಳೆ, ಜೋಳದರಾಶಿ, ಇತ್ಯಾದಿ ಗ್ರಾಮಗಳ ಸ್ವಯಂ ಸೇವಕರು ನಾನಾ ಮುಖವಾಗಿ ಕೆಲಸ ಮಾಡುತ್ತಿದ್ದರು. 05–02–1984ರಂದು ಪರಿಷತ್ತು ನಿಯಮಿತ ವೇಳೆಗೆ ಬಳ್ಳಾರಿಯ ಸುಪ್ರಸಿದ್ಧ ಜಿಲ್ಲಾ ಬೋರ್ಡಿನ ಅಧ್ಯಕ್ಷರಾದ ವೈ. ಮಹಾಬಲ್ಲೇಶ್ವರಪ್ಪನವರ ಧ್ವಜವಂದನೆಯ ಕಾರ್ಯದಿಂದ ಪ್ರಾರಂಭವಾಗಿ ರಾತ್ರಿ 12 ಗಂಟೆಯವರೆವಿಗೂ ನಾಡಿನ ವಿವಿಧ, ಕಲಾವಿದರ, ಪಂಡಿತರ, ಸಾಹಿತಿಗಳ ಮುಖಂಡರಿಂದ ಕುಡಿ ನಿರ್ವಿಘ್ನವಾಗಿ ಸಾಗಿತ್ತು. ಅಂದು ನಮ್ಮ ಜೋಳದರಾಶಿ ಕಲಾ ರಶಿಯಾಗಿತ್ತು. ನಾಡಿನ ನಾನಾ ಭಾಗಗಳಿಂದ ಬಂದ ಜನ 5 ಸಾವಿರಕ್ಕೂ ಮಿಕ್ಕಿತು.

ಪರಿಷತ್ತಿನ ನಿಯಮಗಳಂತೆ ಎಲ್ಲಾ ಸಾಗಿತ್ತು. ಆದರೆ ನಮ್ಮ ತಂದೆಯವರು ಒಂದು ತೊಡಕನ್ನು ತಂದಿಕ್ಕಿದರು. ಹಳ್ಳಿಯ ಸಂಪ್ರದಾಯಬದ್ಧ ರೀತಿಗೆ ಈ ಪರಿಷತ್ತು ಒಂದರಲ್ಲಿ ಕುಂದು ತಂದು ಹಳ್ಳಿಯ ಗೌರವ ಕೆಡಿಸುತ್ತಿದೆಯೆಂದು ಸಿಟ್ಟಾದರು. ಇದಕ್ಕೆ ಬಾಪುರದ ಓರೇಗೌಡರು, ತಿಮ್ಮಾಪುರದ ಮರಿಬಸವನ ಗೌಡರು ಬೆಂಬಲವಿತ್ತರು. ಆದೆಂದರೆ ಊಟಕ್ಕೆ ಟಿಕೀಟುಗಳು, ಎಲ್ಲಿ ಪರಿಷತ್ತು ನಡೆದರೂ ಆ ಪದ್ಧತಿಯು ಪ್ರತಿನಿಧಿಗಳ ಶುಲ್ಕವಾಗಿ ಬಳಕೆಯಲ್ಲಿತ್ತು. ಯಾರು ಏನು ಹೇಳಿದರು ಅವರು ಒಪ್ಪಲಿಲ್ಲ. "ಆ ಟಿಕೇಟು ಹರಿದು ತಿಪ್ಪೆಗೆ ಚೆಲ್ರಿ. ರೊಕ್ಕ ತಗೊಂಡು ಅನ್ನ ಹಾಕಿದರಂದ್ರೆ ಈ ಊರಿಗೆ ಮರ್ಯಾದೆ ಬಂದೀತೆ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿ ಕಾರ್ಯದಲ್ಲಿ ತೊಡಗಿಯೇ ಬಿಟ್ಟರು. ಒಂದು ಕಾಸು ಯಾರ ಹತ್ತಿರ

ತೆಗೆದುಕೊಳ್ಳಲಿಲ್ಲ. ಎಲ್ಲವೂ ಆ ಬಗ್ಗೆ ಅವರ ಇಚ್ಛೆಯಂತೆ ನಡೆಯಿತು. ಆ ಕಾರ್ಯದಲ್ಲಿ ಕಂಕಣ ಬದ್ಧರಾಗಿ ನಿಂತರು. ಹಳ್ಳಿಯ ಸಹಜ ಉದಾರತೆಗೆ ಕುಂದಾಗದೆ ನಿರ್ವಹಿಸಿದರು.

**ರಾಘವ ಕಲಾಮಂದಿರದ ಶಂಕುಸ್ಥಾಪನೆ**

ಮತ್ತೆ ಮನೆ ಜ್ವರ, ಚಳಿ, ಔಷಧ, ಉಪಚಾರ ಬಳಲಿಕೆ ಇವು ನನ್ನ ಸೊತ್ತಾದವು. ಚೇತರಿಸಿಕೊಳ್ಳುವಲ್ಲಿ ರಾಘವ ಸ್ಮಾರಕ ಸಂಘಕ್ಕೆ ಇಷ್ಟು ವರುಷಗಳ ಮೇಲೆ ನಮ್ಮ ಭಗೀರಥ ಪ್ರಯತ್ನಕ್ಕೆ ಕಾಟಮಟ್ಟಿಯ ಪಕ್ಕದ ಜಾಗ ಸ್ಟೇಜುಕಟ್ಟಲು ಮಂಜೂರಾಗಿತ್ತು. ತಡವಾದರೂ ನಮಗೆ ಒಳ್ಳೆಯ ಜಾಗ ಸಿಕ್ಕಿತ್ತು. ಥಿಯೇಟರ್ ಕಟ್ಟಡದ ಶಂಕುಸ್ಥಾಪನೆ ಚೀಫ್ ಜಸ್ಟೀಸ್ ರಾಜಮನ್ನಾರ್, ರೆವೆನ್ಯೂ ಮಂತ್ರಿ ಸೀತಾರಾಮರೆಡ್ಡಿಯವರ ಅಧ್ಯಕ್ಷರ್ಯದಲ್ಲಿ ನಡೆಸಲು ನಿಶ್ಚಯಿಸಿ 13.12.1989 ರಂದು 'ಚಿತ್ರನಳೀಯ' ನಾಟಕವಾಡಲು ಏರ್ಪಾಟಾಯಿತು. ಕಾರ್ಯಗಳು ಯಶಸ್ವಿಯಾಗಿ ಮುಂದುವರಿದು ನಾಟಕ ಮತ್ತು ಶಂಕುಸ್ಥಾಪನೆಯ ಕಾರ್ಯಗಳು ಮಂಗಳಪ್ರದವಾಗಿ ನಡೆದವು. ನಾಟಕ ಭವನ ಕಟ್ಟಬೇಕೆಂಬ ನಮ್ಮ ಆಸೆಯ ಭವನಕ್ಕೆ ಮಂಗಲಪ್ರದ ಈ ಕಾರ್ಯಕ್ರಮದಿಂದ ಎಲ್ಲರಿಗಿಂತಲೂ ನನಗೆ ಹರ್ಷವಾಯಿತು.

ಇಷ್ಟೆಲ್ಲಾ ಅಯಿತು. ಆಂದ್ರ ಕರ್ನಾಟಕದ ಪಿಡುಗು ಬಳ್ಳಾರಿಗೆ ಬಂತು. ಅದಕ್ಕಾಗಿ ಮದ್ರಾಸು ಸರಕಾರ ವಿಭಜನಾ ಕಮಿಟಿಯನ್ನು ಬಳ್ಳಾರಿಗೆ ಕಳಿಸಿದರು. ಕೂಡಿ ಸುಖವಾಗಿದ್ದ ತೆಲುಗು ಕನ್ನಡದವರು ನಾನಾ ಮಾತ್ಸರ್ಯಗಳಿಗೊಳಗಾಗಿ ಒಬ್ಬರ ಮುಖ ಮತ್ತೊಬ್ಬರು ನೋಡಲಾರದ ಪ್ರಸಂಗ ಒದಗಿತ್ತು. ಈ ಪ್ರಸಂಗವು ನಮ್ಮ ರಾಘವಸ್ಮಾರಕ ಕಮಿಟಿಯ ಕಾರ್ಯ ನಡೆಯಲು ದೊಡ್ಡ ಕುತ್ತಾಗಿ ನಿಂತಿತು.

**ಎರಡನೆಯ ನಾಟಕ ಪರಿಷತ್ತು.**

ಮತ್ತೆ ನಮ್ಮ ನಾಟ್ಯ ಕಳಾಪರಿಷತ್ತಿನ ಕಾರ್ಯ ಸುಮ್ಮನೆ ಮನೆಯಲ್ಲಿ ಕೈ ಕಟ್ಟಿ ಕೂಡಿಸಲಿಲ್ಲ. ಅಲ್ಲಿ ಇಲ್ಲಿ ಎಲ್ಲೆಲ್ಲಿಯೋ ಪರಿಷತ್ತಿನ ಭದ್ರತೆಗಾಗಿ ಹಣ ಸಂಗ್ರಹದ ಓಡಾಟ, ಕಲೆಯ ಸುಧಾರಣೆಗಾಗಿ ಹೋರಾಟ ನಡೆದೇ ಇದ್ದವು. ಜೋಳದರಾಶಿಯ ಪರಿಷತ್ತಿನಲ್ಲಿ ನಿರ್ಣಯವಾದಂತೆ ರಾಯದುರ್ಗದಲ್ಲಿ ಹೋದ ವರುಷವೇ ಎರಡನೆಯ ಪರಿಷತ್ತು

ನಡೆಯಬೇಕಾಗಿತ್ತು. ಹಾಗೆ ನಡೆಯುವ ಅನುಕೂಲತೆಗಳು ಒದಗಿಬಾರದ್ದರಿಂದ ಆ ವರುಷ ಸುಮ್ಮನಾಗಿ ಈ ವರುಷ ಎಲ್ಲಿ? ಎಂಬುದು ಮುಖ್ಯ ಚಿಂತೆಯಾಗಿತ್ತು. ಆರ್ಥಿಕ, ಬೌದ್ಧಿಕದ ಕೊರತೆಯ ನಿವಾಸ ಸ್ಥಾನಗಳಾದ ಹಳ್ಳಿಗಳಲ್ಲಿ ಪರಿಷತ್ತು ಕಟ್ಟಿಕೊಂಡ ಉದ್ದೇಶ ಆದರ್ಶಗಳನ್ನು ಬಿಂಬಿಸಬೇಕಾದ ಕೆಲಸ ನಾನಂದುಕೊಂಡುದಕ್ಕಿಂತಲೂ ಹೆಚ್ಚು ಕಷ್ಟಮಯವೂ, ಕ್ಲಿಷ್ಟಮಯವೂ ಆಗಿತ್ತು.

1) ನಾಟಕ ರಚನೆ

2) ನಾಟಕಾಭ್ಯಾಸ

3) ನಾಟಕ ಪ್ರಯೋಗ

ಮುಖ್ಯವಾಗಿ ಈ ಮೂರು ದಿಕ್ಕಿನಲ್ಲಿಯ ಕಲಾಶುದ್ಧತೆಯ ಬಗ್ಗೆ ಪರಿಷತ್ ಧ್ಯೇಯವನ್ನು ಪ್ರಕಟಿಸಿತ್ತು. ನಮ್ಮ ಜಿಲ್ಲೆಯ ಹಳ್ಳಿಗರು ನೂರಾರು ವರುಷಗಳಿಂದ ತಮ್ಮ ದುಃಖ – ದುಗುಡಗಳನ್ನು ಮರೆತು ಬಯಲಾಟಗಳ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದರು. ಅದರ ಅಭಿವೃದ್ಧಿಗಾಗಿ ಪ್ರತಿವರುಷ ಧಾರಾಳವಾಗಿ ವೆಚ್ಚಮಾಡುವ ಉದಾರತೆಯು ಬೆಳೆದಿತ್ತು. ಸುಮಾರು 40 ವರುಷಗಳ ಹಿಂದೆ ಆ ಬಯಲಾಟಗಳಲ್ಲಿ ನಾಟಕದ ಕೆಲವು ಛಾಯೆಗಳನ್ನು ತಂದುಕೊಳ್ಳುವ ಪ್ರಯತ್ನಗಳು ಬಂದಿದ್ದವು. ತರುವಾಯದ ನಾಟಕಗಳಲ್ಲಿ ಆ ಬಯಲಾಟದ ಶೈಲಿಗಳು ನುಸುಳಿಕೊಂಡು ಸೇರಿದ್ದವು. ಶುದ್ಧ ಕಲಾದೃಷ್ಟಿಯಿಂದ ಯಾವುದೂ ಅಷ್ಟೊಂದು ಶುದ್ಧವೆಂದು ಹೇಳುವಂತಿರಲಿಲ್ಲ. ಕಾಲಾನುಸಾರ ಹೀಗಾಗುವುದು ಸಹಜವಾದರೂ ಆಯಾ ಕಲೆಗಳ ಪ್ರತ್ಯೇಕತೆಯನ್ನು ಶುದ್ಧವಾಗುಳಿಸಿಕೊಂಡು ಬರುವ ಯತ್ನಗಳಲ್ಲಿ ಜನರು ಶ್ರದ್ಧೆವಹಿಸಿಲ್ಲ. ಆ ಶ್ರದ್ಧೆಗೆ ಚಾಲನೆ ನೀಡುವುದು ನಡೆಯಬೇಕಾಗಿತ್ತು. ಹಳ್ಳಿಗಳ ದುಸ್ಥಿತಿ, ನಮ್ಮ ದೇಶದಲ್ಲಿ ಮಹಾಪುರುಷರು, ಪ್ರತಿಭಾನ್ವಿತ ಕಲಾಪುರುಷರು ಬಹುಮಟ್ಟಿಗೆ ಹುಟ್ಟಿ ಬರುವುದು ಹಳ್ಳಿಗಳಿಂದಲೇ. ಆದರೆ ಮಹಾ ಪವಿತ್ರ ನದಿಗಳ ಉಗಮ ಸ್ಥಾನಗಳಂತೆ ಆ ಮಹಾಪುರುಷರಿಗೆ ಜನ್ಮವಿತ್ತ ಹಳ್ಳಿಗಳು ಇಂದಿಗೂ ನಿಕೃಷ್ಟಸ್ಥಿತಿಯಲ್ಲಿವೆ. ತಮ್ಮ ಉಗಮದ ಪುನರಾಗಮನದ ಗತಿಯಿಲ್ಲದ ಮಹಾನದಿಗಳಂತೆ ಮಹಾಪುರುಷರು ವಿಶ್ವವಿಖ್ಯಾತಿಯಲ್ಲಿ ಬೆರೆಯುತ್ತಿರುವುದು ಚರಿತ್ರೆಯಿಂದ ತಿಳಿದು ಬರುತ್ತೆ. ಹಳ್ಳಿಗಳ ಹೀನ, ದೀನ ಚರಿತ್ರೆಯು

ವಿಷಾದಕರವಾಗಿ ಸಾಗುತ್ತಿದೆ. ಈ ವಿಷಾದ ಚಾರಿತ್ರ್ಯವನ್ನು ತಿದ್ದಲು ಸಾಮಾಜಿಕ, ರಾಜಕೀಯಗಳು ಆಗಾಗ ಯತ್ನಿಸುತ್ತಿರುವುದುಂಟು. ಆದರೆ ಆ ಯತ್ನದ ಲಾಭಗಳು ಹಳ್ಳಿಗಾಗುವುದಕ್ಕೆ ಬದಲಾಗಿ ಆ ಯತ್ನದ ಮುಖಂಡರಿಗೆ ಆಗುತ್ತಿರುವುದು ನಮ್ಮ ದೇಶದ ಸುಧಾರಣೆಯ ಸೋಜಿಗ. ಈ ರೀತಿಯ ಸುಧಾರಣೆಗಳೇನಿದ್ದರೂ ಹಳ್ಳಿಗರ ಕಲಾಪ್ರತಿಭೆಯ ಪ್ರಗತಿಗೆ ಇದುವರೆವಿಗೂ ಯಾವ 'ಕೀ' ಯಗಳು ಏನೂ ಮಾಡುವುದಿಲ್ಲ. ಸ್ವಯಂ ಸಾಹಸ ಸ್ಫೂರ್ತಿಗಳಿಂದ ಯಾವ ಯಾರ ನೆರವನ್ನು ಬಯಸದ ಹಳ್ಳಿಗಳ ಈ ಕಲಾಸೇವೆಗೆ ನೆರವಾಗುವ ಉದ್ದೇಶವೇ ನಮ್ಮ ಪರಿಷತ್ತಿನ ಮುಖ್ಯ ಕಾರ್ಯರಂಗವಾಗಿತ್ತು.

**ಮೂರನೆಯ ನಾಟಕ ಪರಿಷತ್**

ಸುಪ್ರಸಿದ್ಧ ಕಾದಂಬರಿಕಾರರಾಗಿಯೂ, ನಾಟಕರರಾಗಿಯೂ, ರಾಘವರ ಒಡನಾಡಿಗರಾಗಿಯೂ ತಮ್ಮ ಅಪಾರ ಸಾಹಿತ್ಯ ಸಂಜೀವಿನಿಯಿಂದ ಕರ್ನಾಟಕದ ಸುಪ್ತ ಚೇತನಕ್ಕೆ ಚೇತನವನ್ನು ನೀಡಿದ ಅ.ನ. ಕೃಷ್ಣರಯರು ಪರಿಷತ್ತಿನ ಅಧ್ಯಕ್ಷರಾಗಿ ಬರುತ್ತಿದ್ದರಿಂದ ಇಲ್ಲಿಯ ಜನಕ್ಕೆ ಉತ್ಸಾಹ ಉಕ್ಕಿತು. ಸ್ನೇಹ – ಸಂಸಾರಿಯಾದ ಅ.ನ.ಕೃ. ಎಲ್ಲಿ ಹೋದರಲ್ಲಿ ಅವರಿಗೆ ಈ ಜಂಝಾಟ ಸುತ್ತಿಕೊಂಡಿರುತ್ತೆ. ಬಳ್ಳಾರಿಯಲ್ಲಿಯೂ ಹೀಗೆ ಆಯಿತು. ಅವರೊಂದಿಗೆ ಅವರ ಗೆಳೆಯರ ಬಳಗದೊಂದಿಗೆ ಕಣ್ಣೇಕಲ್ಲಿಗೆ ಪ್ರಯಾಣ ಸಾಗಿತು. ಸಾಗಿದ್ದು ಪ್ರಯಾಣದಂತಿರದೆ ಅಧ್ಯಕ್ಷರ ಮೆರವಣಿಗೆಯಂತಿತ್ತು. ಕವಿಗಳು, ಪಂಡಿತರು, ಕಲಾವಿದರ ಬಳಗದಿಂದ ಕೂಡಿದ ಪರಿಷತ್ತು, ಚೆನ್ನವೀರ ಶಾಸ್ತ್ರಿಗಳ ಸ್ವಾಗತಾಧ್ಯಕ್ಷತೆಯಲ್ಲಿ 30–03–1952ರಲ್ಲಿ ಅಚ್ಚುಕಟ್ಟಾಗಿ ಮೂರನೆಯ ಕಳಾ ಪರಿಷತ್ತು ಅ.ನ.ಕೃ. ಅವರ ಸರಳ, ಸುಂದರ, ಸಮುಲ್ಲಾಸ ಶೈಲಿಯ ಭಾಷಣವು ನಾಟ್ಯ ಕಲಾಭಿವೃದ್ಧಿಗೆ ಉಪಯುಕ್ತ ಸೂಚನೆಗಳನ್ನಿತ್ತು ಮಾರ್ಗ ದರ್ಶನ ನಿಡಿತು. ಈ ಸಮ್ಮೇಳನದ ಉದ್ಘಾಟನೆ ಮಾಡುವುದು ನನ್ನ ಪಾಲಿಗೆ ಬಂದಿತ್ತು. ನಾಟಕದ ಸಾಹಿತ್ಯ ಕಲೆಗಳ ಬಗ್ಗೆ ಕಾವ್ಯತೀರ್ಥರಾದ ರಾವಾಡ ವೆಂಕಟರಾಮ ಶಾಸ್ತ್ರಿಗಳು, ಸರ್ವದರ್ಶನ ತೀರ್ಥ ವೈ. ನಾಗೇಶ ಶಾಸ್ತ್ರಿಗಳೂ, ಕವಿಭೂಷಣ ಸಂಜೀವಮುರ್ತಿಯವರು, ಬೀಚಿಯವರು, ಭಾಸ್ಕರಾಚಾರ್ಯ ರಾಮಚಂದ್ರಸ್ವಾಮಿಗಳ ಭಾಷಣಗಳು ಮನನೀಯವಾಗಿ ನಡೆದವು. ವಿವಿಧ ಮನರಂಜನೆಗಳು ನಡೆದು ಯಶಸ್ವಿಯಾಗಿ ಪರಿಷತ್ತಿನ ಕಾರ್ಯಗಳು ಮುಕ್ತಾಯಗೊಂಡವು.

**ಕಲಾ ಪುಸ್ತಕ ಪ್ರಕಟಣೆ**

ಸಂತಸದ ವಿಷಯವೆಂದರೆ ನಮ್ಮ ಪರಿಷತ್ತಿನ ಬಹು ಪ್ರಯತ್ನವು ಕಲಾ ಪುಸ್ತಕವಾಗಿ ಅಂದು ಪ್ರಕಟಗೊಂಡಿತು. ತಡವಾದರೂ ಶ್ರಮವಹಿಸಿ ಮಲ್ಲಾಬಾದಿ ವೀರಭದ್ರಪ್ಪನವರು ಈ ಕೆಲಸ ನಿರ್ವಹಿಸಿಕೊಟ್ಟರು. ಮಲ್ಲಾಬಾದಿಯವರ ನೆರವು ನಮ್ಮ ಕಲಾ ಪರಿಷತ್ತಿಗೆ ಆಗಾಗ ದೊರೆಯುತ್ತಿತ್ತು. ಅವರು ಬಂದು ನಮ್ಮ ಕಾರ್ಯಗಳಲ್ಲಿ ಭಾಗವಹಿಸಿ ಉಚಿತ ಸಲಹೆಗಳನ್ನು ನೀಡುತ್ತಿದ್ದರು. ಈ ಪರಿಷತ್ತಿನಲ್ಲಿಯೂ ಮಲ್ಲಾಬಾದಿಯವರು ಬಂದು ಭಾಗವಹಿಸಿದ್ದು ಎಲ್ಲರಿಗೂ ಸಂತಸವಾಗಿತ್ತು.

ಪರಿಷತ್ತು ಮುಗಿದರೂ, ಅ.ನ.ಕೃ. ಅವರ ಸ್ನೇಹ ಪರಿಷತ್ತು ಮುಗಿಯಲಿಲ್ಲ. ಅವರ ಪರಿಚಯ ಬಹುಗಾಲದಿಂದಿದ್ದರೂ ಆ ಸಲದ ಸನ್ನಿವೇಶ ನಮ್ಮನ್ನು ಸ್ನೇಹದಲ್ಲಿ ಬಿಗಿಯಿತು. ಅಷ್ಟೇ ಅಲ್ಲ, ಅದು ಮುಂದೆ ಬಿಡಲಾರದಷ್ಟು ಹುಲುಸಾಗಿ ಬೆಳೆಯಿತು.

**ರಾಮೇಶ ಕಲಾಮಂದಿರದ ಉದ್ಘಾಟನೆ**

ಹೇಗೋ ಸಾಗಿತು. ಅನಿವಾರ್ಯ ಲೋಕ ಸಂಸಾರ ಸಾಗರದ ಕಾರ್ಯ ತರಂಗಗಳಲ್ಲಿ ಮುಳುಗುತ್ತಾ ತೇಲುತ್ತಾ ನಡೆದೆ. ಸಿದ್ಧವಾದ ರಾಮೇಶ ಕಲಾ ಮಂದಿರದ ಉದ್ಘಾಟನಾ ಕಾರ್ಯ ಬಳ್ಳಾರಿಯ ಸುಪ್ರಸಿದ್ಧ ಜಿಲ್ಲಾ ಬೋರ್ಡು ಅಧ್ಯಕ್ಷ ವೈ. ಮಹಾಬಲೇಶ್ವರಪ್ಪನವರ ಅಧ್ಯಕ್ಷತೆಯಲ್ಲಿ ಪಂಡಿತ ವೈ. ನಾಗೇಶ ಶಾಸ್ತ್ರಿಗಳು ಸರ್ವದರ್ಶನ ತೀರ್ಥರ ಹಸ್ತದಿಂದ ಉದ್ಘಾಟನೆಯು 11.12.1953ರಂದು ಮಂಗಳಪ್ರದವಾಗಿ ಸಾಗಿತ್ತು. ಸಾಹಿತ್ಯ, ಸಂಗೀತ, ನಾಟಕಗಳ ಕಾರ್ಯಕ್ರಮಗಳಿಂದ ಚಿಕ್ಕ ಪರಿಷತ್ತಿನಂತೆ ಯಶಸ್ವಿಯಾಗಿ, ಕಲಾತ್ಮಕವಾಗಿ ಮುಕ್ತಾಯವಾಯಿತು. ಈ ಸಮಯದಲ್ಲಿ ನನ್ನ **'ಶಿವನಾಣೆ'** ನಾಟಕದ ಪ್ರದರ್ಶನವೂ ಆಗಿ ಸಂತಸವಾಯಿತು.

**ಸಂಗೀತ ನಾಟಕ ಅಕಾಡಮಿ ಸ್ಥಾಪನೆ**

ಬೆಂಗಳೂರಿನಲ್ಲಿ ಸಂಗೀತ ನಾಟಕ ಅಕಾಡೆಮಿಯು, ಪ್ರಾರಂಭವಾಗುವುದಿದ್ದು ಅದಕ್ಕಾಗಿ ಬರಲು ಕರೆ ಬಂದುದರಿಂದ ಹೋದೆ. 18.02.1954ರಂದು ಶ್ರೀ ಜಯಚಾಮರಾಜೇಂದ್ರ ಮಹಾರಾಜರ ಅಧ್ಯಕ್ಷತೆಯಲ್ಲಿ, ಚೀಫ್ ಜಸ್ಟೀಸ್ ರಾಜಮನ್ನಾರ ಇವರಿಂದ ಉದ್ಘಾಟಿಸಲ್ಪಟ್ಟು, ಮೊಟ್ಟ ಮೊದಲಿಗೆ ಮೈಸೂರು ರಾಜ್ಯದಲ್ಲಿ ಅಕಾಡೆಮಿ ಸ್ಥಾಪಿತವಾಯಿತು. ಈ ಅಕಾಡೆಮಿಯ ಪ್ರಾರಂಭದ ಪ್ರಾರ್ಥನೆ ಹೇಳಲು ನಾನು ಹೋಗಿದ್ದೆ, ಅಂದು ಶ್ರೀ ಗುಬ್ಬಿ ವೀರಣ್ಣನವರು ಹೊಸದಾಗಿ ತಯಾರಿಸಿದ, ದಶಾವತಾರ ನಾಟಕದ, ಕೆಲವು ವೈಭವಯುಕ್ತ ದೃಶ್ಯಗಳನ್ನು ನೋಡಿದ್ದೆ. ಈ ಸಂಗೀತ ಅಕಾಡೆಮಿಯ ಕಾರ್ಯಕ್ರಮಗಳೆಲ್ಲ, ಅವರ ನಾಟಕ ಭವನದಲ್ಲಿಯೇ ನಡೆದವು. ಅಲ್ಲಿಯ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಊರು ಸೇರಿದೆ.

**ಶಿವಾನುಭವ ಸಪ್ತಾಹ ಷಷ್ಟ್ಯಬ್ಧ ಸಮಾರಂಭ**

ಇಷ್ಟೆಲ್ಲಾ ಊರಲ್ಲಿಯ ಕೆಲಸಗಳು ಸಾಗಿದ್ದಾಗ, ಬಳ್ಳಾರಿಯಲ್ಲಿ ವೈ. ನಾಗೇಶ ಶಾಸ್ತ್ರಿಗಳ ಷಷ್ಟ್ಯಬ್ಧದ ಕೆಲಸ ಒತ್ತರಿಸಿ ಬಂದದ್ದರಿಂದ ಜಿಲ್ಲೆಯಲ್ಲಿ ಸಂಚರಿಸಿ ನಿಧಿ ಕೂಡಿಸುವ ಕಾರ್ಯದಲ್ಲಿ ತೊಡಗಿದೆ. ನಮ್ಮ ಜಿಲ್ಲೆಯಲ್ಲಿ ಪಂಡಿತರಿಗಾಗಲೀ, ಕವಿಗಳಿಗಾಗಲೀ, ಕಲಾವಿದರಿಗಾಗಲೀ, ಇಂತಹ ಷಷ್ಟ್ಯಬ್ಧಗಳು ಯಾರಿಗೂ ಯಾರೂ ನಡೆಯಿಸಿರಲಿಲ್ಲ. ಇದೊಂದು ನೂತನ ಕಾರ್ಯಾರಂಭವಾದ್ದರಿಂದ, ನಮ್ಮ ಸಮಿತಿಯು ಬಹು ಕುಶಲತೆಯಿಂದ, ನಿಧಿ ಸಂಗ್ರಹಿಸುವ ಕಾರ್ಯ ಮಾಡಬೇಕಾಗಿತ್ತು. ಮಹಾಬಲ್ಲೇಶ್ವರಪ್ಪನವರು ಇದಕ್ಕೆಲ್ಲಾ ಬೆಂಬಲಿಗರಾಗಿದ್ದುದ್ದರಿಂದ, ಸುಮಾರು ಎಂಟು ಸಾವಿರ ರೂಪಾಯಿ ನಿಧಿ ಕೂಡಿಸಲಾಯಿತು.

ಶಿವಾನುಭವ ಸಪ್ತಾಹವು, ಮೊಟ್ಟ ಮೊದಲಿಗೆ ನಮ್ಮಲ್ಲಿ ಆಚರಣೆಗೆ ಬಂದು ಅವರ ನೇತೃತ್ವದ ಮಹಾ ಕಾರ್ಯಕ್ಕೆ, ಧಾರವಾಡದ ಮೃತ್ಯುಂಜಯ ಸ್ವಾಮಿಗಳು ದಯಮಾಡಿಸಿದರು. ಯಶಸ್ವಿಯಾಗಿ ಸಪ್ತಾಹವು ಮುಕ್ತಾಯಗೊಂಡು ನಂತರ 12-09-1955 ರಂದು 'ಪ್ರಭಾತ' ಚಿತ್ರಮಂದಿರದಲ್ಲಿ ಜಿಲ್ಲಾ ನ್ಯಾಯಾಧೀಶರಾದ ಗುಬ್ಬಯ್ಯನವರ ಅಧ್ಯಕ್ಷತೆಯಲ್ಲಿ, ಮೃತ್ಯುಂಜಯ ಮಹಾಸ್ವಾಮಿಗಳ ದಿವ್ಯ ನೇತೃತ್ವದಲ್ಲಿ, ಮಹಾ ವೈಭವದಿಂದ, ಇನ್ನೆಂದೂ ಯಾರದೂ ಹೀಗಾಗಲಾರದೆಂಬಂತೆ, ಪಂಡಿತ ವೈ. ನಾಗೇಶಶಾಸ್ತ್ರಿಗಳ ಷಷ್ಟ್ಯಬ್ದ ಸಮಾರಂಭ ಕಾರ್ಯಗಳು

ಮಂಗಳಪ್ರದವಾಗಿ ನಡೆದವು. ಧಾರವಾಡದ ಶ್ರೀಗಳು ಈ ಎಲ್ಲಾ ಕಾರ್ಯಗಳಿಗೆ, ಮಂಗಲ ಸ್ವರೂಪಿಗಳಾಗಿ ಚೇತನವನ್ನು ನೀಡಿದ್ದರು. ನಾಡಿನ ಅನೇಕ ಸಂಘ –ಸಂಸ್ಥೆಗಳ, ಗೌರವ ಮಾಲಾರ್ಪಣೆಗಳಾದ ತರುವಾಯ ಮೃತ್ಯುಂಜಯ ಮಹಾಸ್ವಾಮಿಗಳು ಮಂಗಲಾಶೀರ್ವಾದ ಮಾಡಿದರು. ಈ ಸಮಾರಂಭದ ಸವಿನೆನಪಿಗಾಗಿ 'ನಾಗೇಶಕವಿ ಪ್ರಶಸ್ತಿ' ಎಂಬ ಗ್ರಂಥವನ್ನು ಪ್ರಕಟಿಸಲಾಯಿತು.

**ರಾಘವ ಕಲಾಮಂದಿರದ ಉದ್ಘಾಟನೆ**

ರಾಘವರ ಅಂತ್ಯ ಕೋರಿಕೆಯು ಇಂದು ನೆರವೇರಿತ್ತು. ಅದಕ್ಕಾಗಿ 18 ವರುಷಗಳು ಕಾಯಬೇಕಾಗಿತ್ತು. ಕಮೀಟಿಯ ಅಧ್ಯಕ್ಷರಾದ ಎಚ್. ಲಿಂಗಾರೆಡ್ಡಿಯವರ, ವೇಣುಗೋಪಾಲಾಚಾರ್ಯರ ಜಿಗುಟುತನದಿಂದ, ರಾಘವ ಕಲಾಮಂದಿರವು 16.02.1964 ರಂದು ಸರ್ವಾಲಂಕಾರ ಸುಶೋಭಿತವಾಗಿ, ಸಾಯಂಕಾಲ 4 ಗಂಟೆಯಿಂದ ರಾತ್ರಿ 9 ಗಂಟೆಯವರೆವಿಗೂ, ವಿಜೃಂಭಣೆಯಿಂದ ಪ್ರಾರಂಭೋತ್ಸವವು ನಡೆಯಿತು.

ಮೈಸೂರು ರಾಜ್ಯದ ಗೃಹಮಂತ್ರಿಗಳ ಅಧ್ಯಕ್ಷತೆಯಲ್ಲಿ, ಬೆಜವಾಡದ ಗೋಪಾಲರೆಡ್ಡಿಯವರಿಂದ ನಾಟ್ಯಭವನವು ಪ್ರಾರಂಭವಾಯಿತು. ಆಂಧ್ರಪ್ರದೇಶದ ಸುಪ್ರಸಿದ್ಧ ನಟರಾದ ಸ್ಥಾನಂ ನರಸಿಂಹರಾಯರು, ಬಂದಾಕನಕ ಲಿಂಗೇಶ್ವರರಾಯರು, ಕರ್ನಾಟಕದ ನಾಟಕರತ್ನ ಗುಬ್ಬಿ ವೀರಣ್ಣನವರು, ವಿಖ್ಯಾತ ನಟೀ ಮಣಿಯಾದ ಜಯಮ್ಮನವರು, ಎಚ್. ಸೀತಾರಾಮ ರೆಡ್ಡಿಯವರು, ಸಿನಿಮಾ ಡೈರೆಕ್ಟರ್ ಬಿ.ಎಸ್. ರೆಡ್ಡಿಯವರು ಇತ್ಯಾದಿಯವರಿಂದ ಭಾಷಣಗಳಾದವು.

ಸುಮಾರು 5 ಘಂಟೆಗಳ ದೀರ್ಘವಾದ ವಿಜೃಂಭಣೆಯ ಕಾರ್ಯಕ್ರಮಗಳು, ಪಂಡಿತರು, ರಾಜಕೀಯ ಮುಖಂಡರು, ಸುಪ್ರಸಿದ್ಧ ಕವಿಗಾಯಕರು, ನಾಟ್ಯ ಕಲಾವಿದರಿಂದ ನಡೆದುದೆಂದರೆ ಬಳ್ಳಾರಿಯಲ್ಲಿ ಇದೇ ಮೊದಲೆಂದು ಹೇಳಬಹುದು. ಕಲಾಮಂದಿರದ ಹೆಸರಿಗೊಪ್ಪುವ ಅಲಂಕಾರಗಳು ಜನ–ಮನಾಕರ್ಷಕವಾಗಿದ್ದವು. ಮಧ್ಯ ಒಂದುಗಂಟೆಯ ವಿರಾಮದ ನಂತರ ರಾತ್ರಿಯ, ಕಾರ್ಯಕ್ರಮಗಳು 10 ಗಂಟೆಯಿಂದ ಪ್ರಾರಂಭ. ಬಂದಾಕನಕ

ಲಿಂಗೇಶ್ವರ ರಾಯರು ಮತ್ತು ನಾನು 'ಚಿತ್ರನಳೀಯ'ದಲ್ಲಿಯ 'ನಕ್ಷತ್ರಮಾಲ' ಎಂಬ ಚಿಕ್ಕ ಭಾಗವನ್ನು ಬಹು ಯಶಸ್ವಿಯಾಗಿ ಅಭಿನಯಿಸಿದೆವು. ತರುವಾಯ ಮದ್ರಾಸಿನಿಂದ ಬಂದ ವಿಖ್ಯಾತ ಸಿನಿಮಾ ನಾಟ್ಯತಾರೆ, ಜಯಲಕ್ಷ್ಮಿಯವರ ಅಮೋಘ ನಾಟ್ಯದೊಂದಿಗೆ, ಎಲ್ಲಾ ಕಾರ್ಯಕ್ರಮಗಳು ಕಲಾತ್ಮಕವಾಗಿ ಮುಕ್ತಾಯವಾದವು. ನಾಟ್ಯಭವನವು ಕಿಕ್ಕಿರಿದು ರಸಿಕಜನ ಮನೋಲ್ಲಾಸವಾಗಿದ್ದು ಬಹು ದಿನಗಳ ದೊಡ್ಡನಗೌಡರ ಸಮಿತಿಯ ಶ್ರಮಕ್ಕೆ ಸಾಫಲ್ಯವನ್ನು ನೀಡಿತು.

ದೊಡ್ಡನಗೌಡ ಅಂದಿನ ಆನಂದ ಅಪಾರ. ಬಳ್ಳಾರಿಯಲ್ಲಿ ನಾಟಕಭವನವಾದುದೊಂದು ಪವಾಡ. ಬಳ್ಳಾರಿಯ ಕೀರ್ತಿಶಾಲಿಗಳೆಷ್ಟೋ ಜನರು ಗತಿಸಿ ಹೋಗಿದ್ದಾರೆ. ಆದರೆ ಅವರಲ್ಲಿ ಸ್ಮಾರಕವಾಗಿ ನಿಂದುದೆಂದರೆ ರಾಘವ ಕಲಾಮಂದಿರ ಒಂದೇ ಒಂದು.

**ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ**

ಹೀಗೆ 1970 ನೇಯ ವರುಷ ಸಮಾರಂಭಗಳೊಂದಿಗೆ, ಕೊನೆಯಾಯಿತೆಂದು ಭಾವಿಸುತ್ತಿರುವಾಗ, 26 ಡಿಸೆಂಬರ್ 1971 ರಂದು ನಡೆಯುತ್ತಿದ್ದ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಆಹ್ವಾನದಂತೆ, ಬೆಂಗಳೂರಿಗೆ ಹೋದೆ. ಅಲ್ಲಿಯ ಸುವರ್ಣೋತ್ಸವು "ನಭೂತೋನಭಿವಷ್ಯತಿ" ಎಂಬುವಂತೆ ಪರಿಷತ್ತಿನ ಅಧ್ಯಕ್ಷರಾದ, ಜಿ. ನಾರಾಯಣರ ಯಾಜಮಾನ್ಯದಲ್ಲಿ ಬಹು ವೈಭವವಾಗಿ ನಡೆಯಿತು. ಹತ್ತು ಸಾವಿರಕ್ಕೂ ಮೇಲ್ಪಟ್ಟು ಜನರು ಸುವ್ಯವಸ್ಥಿತವಾಗಿ ಕೂಡುವ, ಆಸನಗಳ ವ್ಯವಸ್ಥೆಯಿಂದ ನಿರ್ಮಾಣವಾದ ಭವ್ಯ ಮಂಟಪವು, ಕೊನೆಯಸಾಲಿನವರೆಗೂ ಎದ್ದು ಕಾಣುವ, ಎತ್ತರದ ವೇದಿಕೆಯು, ಮಂಟಪದ ಸುತ್ತು ಆವರಿಸಿದ ಬಯಲಿನಲ್ಲಿ, ಎಲ್ಲಿ ನಿಂತರು, ಎಲ್ಲಿ ಕೂತರು, ಕೇಳಿಸುವ ಧ್ವನಿವರ್ಧಕಗಳು, ಮಂಟಪದ ಎಡಭಾಗ ಮುಂಭಾಗದಲ್ಲಿ, ಕಾಂಪೌಡಿನ ಆಸರಗೊಂಡು ನಿರ್ಮಿತವಾದ, ಚಿತ್ರಪ್ರದರ್ಶನ ಶಾಲೆಗಳು, ಪುಸ್ತಕಾಲಯಗಳು, ಪ್ರತಿನಿಧಿಗಳ ವಿಶ್ರಾಂತಿ ಮಂಟಪಗಳು, ಪಾನೀಯ ಮಂದಿರಗಳು ಅಚ್ಚು-ಕಟ್ಟಾಗಿ ಸಾಲುಗಟ್ಟಿ ಸುಂದರ ಅಲಂಕಾರಗಳಿಂದ, ಪರಿಚಯದ ಹಲಗೆಗಳಿಂದ, ಶೋಭಿಸುತ್ತಿದ್ದವು.

ಮಂಟಪದ ಆವರಣ ಮತ್ತು ಸ್ವಯಂ ಸೇವಕರು, ಸಭೆಗೆ ಬರುವವರನ್ನು ಗೌರವದಿಂದ ಆಹ್ವಾನಿಸಿ ಕೂಡಿಸುವ, ಕೂತವರಿಗೆ ಅನುಕೂಲತೆಯನ್ನು ಕಲ್ಪಿಸುವ ಏರ್ಪಾಟುಗಳು ಮಹಿಳೆಯರ ವಿಭಾಗಕ್ಕೆ ಮಹಿಳಾ ಸ್ವಯಂ ಸೇವಿಕೆಯರು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿದ್ದರು. ಸಭಿಕರು ಗುಸುಗುಟ್ಟಲು ಅವಕಾಶ ನೀಡದ, ಶಾಂತವಾಗಿರಿಸುವ ಕಾರ್ಯಕರ್ತರು, ಗದ್ದಲವಿಲ್ಲದೆ ಸುಳಿದಾಡುತ್ತಿದ್ದರು. ಆ ಸಭೆಯ ಕಾರ್ಯ-ಕಲಾಪಗಳನ್ನು ನೋಡಿದಾಗ ಇಷ್ಟೊಂದು ಘನತರವಾದ ವ್ಯವಸ್ಥೆಯನ್ನು ಮಾಡಲು ಹೇಗೆ ಸಾಧ್ಯವಾಯಿತು ಎಂದು, ನನ್ನಲ್ಲೇ ನಾನು ಸೋಜಿಗಗೊಂಡೆ. ಈ ಮಹಾ ಮಂಟಪಕ್ಕೆ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಹೆಸರಿಟ್ಟಿದ್ದರು. ಅಂಗೀಕೃತ ಗೀತೆಯೊಂದನ್ನು, ರಾಷ್ಟ್ರಕವಿ ಕೆ.ವಿ.ಪುಟ್ಟಪ್ಪನವರ ಗೀತೆಯೊಂದನ್ನು, ಹೆಣ್ಣು ಹುಡುಗಿಯರು, ಹನ್ನೊಂದು ಗಂಟೆಗೆ ಪ್ರಾರ್ಥನೆ ಮಾಡಿದ ನಂತರ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣೋತ್ಸವ ಪ್ರಾರಂಭವಾಯಿತು. ಮೈಸೂರು ರಾಜ್ಯಪಾಲರ ಇಂಗ್ಲೀಷು ಭಾಷಣದಿಂದ ಉದ್ಘಾಟನೆ ನಡೆಯಿತು. ಪರಿಷತ್ತಿನ ಅಧ್ಯಕ್ಷರಾದ ಜಿ. ನಾರಾಯಣರಿಂದ ಸ್ವಾಗತ ಭಾಷಣವಾಯಿತು. ತರುವಾಯ ಹಿರಿಯರಾದ ಡಿ.ವಿ. ಗುಂಡಪ್ಪನವರ, ಹಾರ್ದಿಕ ಹಾರೈಕೆಯ ಭಾಷಣವು ಉದ್ಬೋಧಕವಾಗಿಯೂ, ಅನುಭವಪೂರ್ಣವಾಗಿಯೂ, ಹಿಂದಿನ –ಇಂದಿನ ಸಾಹಿತ್ಯ ಸಮೀಕ್ಷೆಯು, ಆಗಿದ್ದುದಲ್ಲದೆ ತರುಣ ಸಾಹಿತಿಗಳಿಗೆ ಬುದ್ಧಿವಾದವೂ ಆಗಿತ್ತು.

ತರುವಾಯ ವೀರೇಂದ್ರಪಾಟೀಲರ ಅಧ್ಯಕ್ಷತೆಯಲ್ಲಿ, ಇತರ ಕಾರ್ಯ ಕ್ರಮಗಳು ಚೆನ್ನಾಗಿಯೇ ನಡೆದವು. 'ಚಿನ್ನದ ಬೆಳಸು' ಪುಸ್ತಕ ಬಿಡುಗಡೆ ಮಾಡುವ ಸಂದರ್ಭದಲ್ಲಿ ಕೆ. ಹನುಮಂತಯ್ಯನವರು, ಗಡಿ ಪ್ರಶ್ನೆಯ ಬಗ್ಗೆ ಮಾತನಾಡಿದಾಗ ಕೊಂಚ ಅಸಮಾಧಾನದ ಗದ್ದಲವೆದ್ದಿತಾದರೂ, ಕೊನೆಗೆ ಶಾಂತವಾಯಿತು. ಇನ್ನಿತರ ಕಾರ್ಯಕ್ರಮಗಳಲ್ಲಿ, ಅಂತರ್ ಭಾರತೀಯ ಭಾಷಾಗೋಷ್ಠಿಯ ಕಾರ್ಯಕ್ರಮವು ನಡೆಯಿತು. ಮರುದಿನ ಜವರೇಗೌಡರ ಅಧ್ಯಕ್ಷತೆಯಲ್ಲಿ, ಮಾಮೂಲಿನ ವಾರ್ಷಿಕ ಸಮ್ಮೇಳನವು ನಡೆಯಿತು. ಅದರ ಮರುದಿನ ಎಚ್.ಎಂ. ರಾಮಾರಾಧ್ಯರ ಸಂಚಾಲಕತ್ವದಲ್ಲಿ, ರಾಳ್ಳಪಲ್ಲಿ ಅನಂತಕೃಷ್ಣಶರ್ಮರ ಅಧ್ಯಕ್ಷತೆಯಲ್ಲಿ ಸಾಯಂಕಾಲ ಗಮಕಗೋಷ್ಠಿ ನಡೆಯಿತು. ಗಮಕ ಗೋಷ್ಠಿಯಲ್ಲಿ ಜೋಳದರಾಶಿ ದೊಡ್ಡನಗೌಡರು ಕಾರ್ಯಕ್ರಮವಿದ್ದುದರಿಂದ, ಅದರಲ್ಲಿ ಭಾಗವಹಿಸಿ, ಮುಗಿಯುವವರೆಗೂ

ಅವಕಾಶವಿರದೆ, ದೊಡ್ಡನಗೌಡರ ಕಾರ್ಯಕ್ರಮದ ನಂತರ, ಅಧ್ಯಕ್ಷರ ಕ್ಷಮೆ ಕೇಳಿ, ಸೆಕ್ರೆಟೇರಿಯಟ್ ಕ್ಲಬ್ಬಿನಲ್ಲಿ, ಕಾರ್ಯದರ್ಶಿ ಚೆನ್ನಪ್ಪನವರ ಆಹ್ವಾನದಂತೆ, ಅಲ್ಲಿಯ ಕಾವ್ಯವಾಚನದ ಕಾರ್ಯಕ್ರಮಕ್ಕೆ ಹೋಗಬೇಕಾಯಿತು. ಬೆಂಗಳೂರಿನಲ್ಲಿ ಉಸಿರಾಡಿಸಲು ಅವಕಾಶವಿಲ್ಲದೇ ಬೇರೆ ಕಡೆಯ ಕಾರ್ಯಗಳು, ಪರಿಷತ್ತಿನ ಮುಕ್ತಾಯ ಸಮಾರಂಭಕ್ಕೆ ಹೋಗಲು ಅಡ್ಡಿಯಾದವು.

ಸುವರ್ಣ ಮಹೋತ್ಸವವು ಇಷ್ಟೊಂದು ಯಶಸ್ವಿಯಾಗಿ, ದಕ್ಷತೆಯಿಂದ ಇತರ ನಾಡಿನವರಿಗೂ ಆದರ್ಶವಾಗಿ ನಡೆಯಲು ಜಿ.ನಾರಾಯಣರ, ಅವರ ಸಂಗಡಿಗರ ಪ್ರಾಮಾಣಿಕ ನರ್ವೋತ್ಸಾಹದ ದುಡಿಮೆಯೇ ಕಾರಣವೆಂದು ತಿಳಿದರು. ಒಂದು ಮಾತಿನಲ್ಲಿ ಹೇಳುವುದಾದರೆ, ಸಮಾರಂಭ ನಡೆಯುತ್ತಿರುವಾಗ ಗೌಡರು ಪೆಂಡಾಲಿನ ಪಕ್ಕದಲ್ಲಿ, ಸಿಗರೇಟು ಸೇದುತ್ತಿದ್ದಾಗ ಒಬ್ಬ ಸ್ವಯಂ ಸೇವಕ ಬಂದು "ಏನು ಸ್ವಾಮಿ ಇಲ್ಲಿ ಸಿಗರೇಟು ಸೇದುತ್ತೀರಾ, ಇದು ಸರಸ್ವತಿ ಮಂದಿರ" ಎಂದು ಸೌಮ್ಯವಾದಾಗ ನನ್ನನ್ನು ದೊಡ್ಡನಗೌಡರನ್ನು ಛೀ-ಮಾಡಿದಾಗ, ತಪ್ಪು ಒಪ್ಪಿಕೊಂಡು, ನಾಚಿಕೆಯಿಂದ ತಲೆಬಾಗಿದೆ. ಹಲವಾರು ಕಡೆ ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿದ ಅನುಭವವೇ ಬೇರೆ; ಇಂದಾದ ಅನುಭವವೇ ಬೇರೆ. ಪರಿಷತ್ತು ನಡೆಯುವ ಸ್ಥಾನ, ಪರಮ ಪೂಜ್ಯವೆಂಬ ಭಾವನೆಯು ಈ ಹುಡುಗ ಸ್ವಯಂಸೇವಕನಿಗೆ ಬಂದುದಷ್ಟೇ ಅಲ್ಲ; ಹಿರಿಯರ ತಪ್ಪನ್ನು ತೋರಿಸಿ ಕೊಡುವ ದಿಟ್ಟತನಕ್ಕೆ, ಪರಿಷತ್ತಿನ ಹಿರಿಯರ ಸದ್ ವರ್ತನೆಯೇ ಮೂಲವಾಗಿದೆಯೆಂದು ತಿಳಿದು, ಸಂತೋಷಗೊಂಡರು.

**ಬಸವ ಭವನ**

ಬೆಂಗಳೂರಿನ ರಾಜಧಾನಿಯ ಮುಖ್ಯಸ್ಥಳವಾದ, ಹೈಗ್ರೌಂಡ್ ರಸ್ತೆಯಲ್ಲಿರುವ ಮೂರಂತಸ್ತಿನ ಬಸವ ಭವನ, ಶ್ರೀ ಜತ್ತಿಯವರ ಭಕ್ತಿ ಶ್ರದ್ಧೆಗಳ ಹಾಗೂ ತಮ್ಮ ಉನ್ನತೋದ್ಯೋಗ್ಯದ, ನಾಡಿನ ಅನೇಕ ಜನರ ವಿಶ್ವಾಸವನ್ನು ಆದರಣೆಯನ್ನು ಗಳಿಸಿಕೊಂಡುದರ ಫಲವಾಗಿ ಇಲ್ಲಿ ಈ ಬಸವ ಭವನವು ನಿರ್ಮಾಣವಾಗುವಂತಾಯಿತು. ಸುವ್ಯವಸ್ಥಿತವಾದ ಒಂದು ಸಮಿತಿಯನ್ನು ಸ್ಥಾಪಿಸಿ, ಈ ನಿರ್ಮಾಣದ ಕಾರ್ಯಗಳನ್ನು ಮುಂದುವರಿಸಿದವರು.

ಅನೇಕಸಲ ಬೆಂಗಳೂರಿಗೆ ಹೋಗಿಬರುತ್ತಿದ್ದರೂ, ಬಸವ ಭವನವನ್ನು ಗೌಡರು ನೋಡಿರಲಿಲ್ಲ. ಹಾಗೂ ಆ ಸಮಿತಿಯ ಪರಿಚಯವ ದೊಡ್ಡನಗೌಡರಿಗೆಯಿರಲಿಲ್ಲ ಶ್ರೀ ಜತ್ತಿಯವರ ಪರಿಚಯವೇನೋ ದೊಡ್ಡನಗೌಡರಿಗಿತ್ತು. ಶೂನ್ಯ ಸಂಪಾದನೆಯ ಪ್ರವಚನ ಪ್ರಸಾರವು ವಿಶೇಷವಾಗಿ ಬೆಂಗಳೂರಿನಲ್ಲಿ ಆಗಿರಲಿಲ್ಲ. ದೊಡ್ಡನಗೌಡರ ಮಿತ್ರ ಚಂದ್ರಶೇಖರಪ್ಪನವರು, ಈ ದೊಡ್ಡನಗೌಡರ ಪ್ರಸಾರದ ಕಾರ್ಯಕ್ಕೆ ನೆರವಾಗಿ, ಬಸವ ಭವನದಲ್ಲಿ ಶೂನ್ಯಸಂಪಾದನೆಯ ಪ್ರವಚನಗಳನ್ನು ಏರ್ಪಡಿಸಿದ್ದರು, ಅಲ್ಲಿಯ ವಾದ್ಯಗಾರರನ್ನೆ ಕೂಡಿಸಿಕೊಂಡು, ಚಂದ್ರಯ್ಯನವರೊಂದಿಗೆ ಬಸವ ಭವನದಲ್ಲಿ ಅಕಾಡೆಮಿಯ ಉತ್ಸವಾನಂತರ, ಮರುದಿನ ಪ್ರವಚನಗಳು ನಡೆದವು.

ಸಮಿತಿಯ ಯೋಜನೆಗಳಂತೆ, ಬಸವ ಭವನವು ಮುಕ್ತಾಯಗೊಂಡಿರಲಿಲ್ಲ. ಭವನದ ಕೆಳಗಿನ ಅಂತಸ್ತಿನ ಅರ್ಧಭಾಗದಷ್ಟು ಸಮಿತಿಯ ವಶದಲ್ಲಿದ್ದು, ಸಮಿತಿಯವರ ಆಫೀಸು ಕಾರ್ಯಕ್ರಮಕ್ಕೆ, ಸಾಂಸ್ಕೃತಿಕ ಕಾರ್ಯಕ್ರನಕ್ಕೆ ತಕ್ಕಷ್ಟು ಮಾತ್ರ ಉಳಿಸಿಕೊಂಡು, ಮಿಕ್ಕಾದ ಭಾಗಗಳನ್ನೆಲ್ಲಾ ಬಾಡಿಗೆಗೆ ಕೊಡಲಾಗಿತ್ತೆಂದು ತಿಳಿಯಿತು. ವ್ಯವಸ್ಥಿತವಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲು, ಯೋಗ್ಯವಾದ ಮಂದಿರವು ಅಲ್ಲಿರಲಿಲ್ಲ. ಕಟ್ಟಡದ ಬಲಭಾಗದಲ್ಲಿ, ಮೋಟಾರುಗಳ ಗ್ಯಾರೇಜುಗಳಿಗೆಂದು ಉದ್ದೇಶೀಸಲ್ಪಟ್ಟ ಕಟ್ಟಡವನ್ನು, ಚಿಕ್ಕ ಹಾಲಾಗಿ ಪರಿವರ್ತಿನಗೊಳಿಸದ್ದರು. "ಹೀಗೇಕೆ ವ್ಯವಸ್ಥಿತವಾದ ಹಾಲಿಲ್ಲದಿದ್ದರೆ, ಪ್ರೇಕ್ಷಕರಿಗೆ ಹೆಚ್ಚಾಗಿ ಆಸನಗಳಿಲ್ಲದಿದ್ದರೆ, ಕಾರ್ಯಕ್ರಮಗಳು ಎಂತು ನಡೆಯುತ್ತವೆ?" ಎಂದು ಸ್ನೇಹಿತರನ್ನು ವಿಚಾರಿಸಿದಾಗ, "ಇಲ್ಲ–ಸಮಿತಿಯಲ್ಲಿ ಹಣವಿಲ್ಲ. ಕಟ್ಟಡವು ಅರ್ಧಕ್ಕೇ ನಿಂತುಹೋಗಿದೆ. ಜತ್ತಿಯವರು ರಾಜಧಾನಿಯಲ್ಲಿ ಮಂತ್ರಿಗಳಾಗಿರುವವರೆಗೂ ಕೂಡಿದ ಧನದಲ್ಲಿ ಇಷ್ಟಾಗಿದೆ, ವಾಗ್ದಾನಿಗಳು ಕೊಡಬೇಕಾದುದೆಷ್ಟೋ ಇದೆ; ಅವರು ಕೊಟ್ಟಿಲ್ಲ. ಜತ್ತಿಯವರು ಇಲ್ಲಿಲ್ಲ. ಬೇರೆನಾಡಿನ ಉದ್ಯೋಗಿಗಳಾಗಿ ಹೋಗಿದ್ದಾರೆ" ಎಂದು ಆ ಸಂಸ್ಥೆಯ ಹಾಗೂ ಅಪೂರ್ಣಗೊಂಡ ಆ ಬಸವ ಭವನದ, ವಿಷಯಗಳನ್ನು ತಿಳಿದು, ನಮ್ಮವರ ಕೆಲಸಗಳೆಲ್ಲಾ ಹೀಗೆಯೋ ಏನೋ ಎಂದು ಸುಮ್ಮನಾದೆ.

ಪ್ರವಚನಗಳೇನೋ ಚೆನ್ನಾಗಿ ನಡೆಯುತ್ತಿದ್ದವು. ಹಿರಿಯ ಸಾಹಿತಿಗಳು, ನ್ಯಾಯವಾದಿಗಳು, ಹೈಕೋರ್ಟ್ ನ್ಯಾಯಾಧೀಶರು, ಪಂಡಿತರು, ಸಮಿತಿಯ ಮುಖಂಡರು, ಮಹಿಳೆಯರು, ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದರು. ಈ ಸಮಿತಿಯ ಸಂಚಾಲಕರಾಗಲಿ, ಕಾರ್ಯದರ್ಶಿಗಳಾಗಲಿ ವಹಿಸಬೇಕಾದ, ಮಾಡಬೇಕಾದ, ಕರ್ತವ್ಯಗಳಲ್ಲಿ ಯಾಕೋ ಉದಾಸೀನರಾಗಿರುವುದು ಜೋಳದರಾಶಿ ದೊಡ್ಡನಗೌಡರಿಗೆ ಒಂದು ರೀತಿಯ ಅಸಮಾಧಾನವಾದರೂ, ಮಿತ್ರ ಚಂದ್ರಶೇಖರಪ್ಪನವರ ಅಭಿಮಾನದಿಂದ ಸರ್ವರೀತಿಯಿಂದಲೂ ದೊಡ್ಡನಗೌಡರಿಗೆ ನೆರವಿತ್ತುದರಿಂದ ಊಟ ಉಪಚಾರಗಳು, ವಾಹನ ಸೌಕರ್ಯವಿತ್ತುದರಿಂದ, ಆ ಬಸವ ಸಮಿತಿಯ ರೀತಿಯನ್ನು ದೊಡ್ಡನಗೌಡರಿಗೆ ಹೆಚ್ಚಾಗಿ ಗಮನಿಸಲಿಲ್ಲ.

ಈ ದೊಡ್ಡನಗೌಡರು ಕಾರ್ಯಕ್ರಮಗಳಿಗೆ 'ಪ್ರವೀಣ ಕುಮಾರ'ನೆಂಬ ಎಂಟು ವರ್ಷದ ಮಗು ಸೊಗಸಾಗಿ ದೊಡ್ಡನಗೌಡರ ಸಂಗೀತಕ್ಕೆ ಮೃದಂಗ ನುಡಿಸುತ್ತಿದ್ದುದು, ಎಲ್ಲರ ಗಮನವನ್ನೂ ಸೆಳೆಯುವಂತಾಗಿತ್ತು. ನನಗಂತೂ ಅತ್ಯಾಶ್ಚರ್ಯವಾಗಿ, ಈ ಮಗುವಿಗೆ ಎಲ್ಲಿ ಜನರ ದೃಷ್ಟಿ ತಾಗುವುದೋ, ಏನು ಅನಾರೋಗ್ಯವಾಗುವುದೋ, ಎಂಬ ಮಮಕಾರವು ನನ್ನಲ್ಲುಂಟಾಯಿತು. ಮುಂದಿಟ್ಟುಕೊಂಡ ಮೃದಂಗದ ಎತ್ತರದ ಮೇಲೆ ಆರು ಅಂಗುಲ ಕಾಣುತ್ತಿದ್ದ. ಶ್ರೋತೃಗಳಿಗೆ ಆ ಮಗುವಿನ ಮೃದಂಗದ ಗತಿಗಳು, ಆವರ್ತಗಳು ಕೇಳಿಸುತ್ತಿದ್ದವಾಗಲಿ ಹಿಂದಿನವರಿಗೆ ಆ ಮಗು ಕಾಣುತ್ತಿರಲಿಲ್ಲ. ಅವರು ಎದ್ದೆದ್ದು ನೋಡುವಂತಾದಾ, ದೊಡ್ಡನಗೌಡರು ಆ ಮಗುವನ್ನು ನಿಲ್ಲಿಸಿ, ಎಲ್ಲರಿಗೆ ತೋರಿಸಿ "ಈ ಮಗು ನಿಮ್ಮೂರವನು, ಪ್ರಸಿದ್ಧ ಮೃದಂಗವಾದಕರಾದ ವೀರಭದ್ರಯ್ಯನವರ ಮಗ. ಈ ಪ್ರತಿಭಾ ವಿಶೇಷಗಳು ಈ ಮಗುವಿನಲ್ಲಿ ವಿಕಾಸಗೊಂಡಿರುವುದು. ಶಿವನ ಕೃಪೆ ಹಾಗೂ ಅವನ ಪೂರ್ವಜನ್ಮ ಸುಕೃತ. ಇವನು ನಮ್ಮೆಲ್ಲರ ಮಗು, ಅಷ್ಟೇ ಅಲ್ಲ ನಮ್ಮ ದೇಶದ ಸಂಸ್ಕೃತಿಯ ಹೆಗ್ಗುರುತಿನ ಚಿಕ್ಕ ಮಗು. ಅದಕ್ಕೆ ತಕ್ಕಂತೆ ಮಗುವಿನ ತಂದೆ ತಾಯಿಗಳು ಇಟ್ಟ ಹೆಸರು 'ಪ್ರವೀಣ ಕುಮಾರ' ಎಂದು ಚಿಕ್ಕದಾಗಿ ಪರಿಚಯ ನೀಡಿ ಸಭೆಗೆ ವಂದಿಸುವಂತೆ ಮಗುವಿಗೆ ಹೇಳಿದೆ. ಮಗು ವಂದಿಸಿತು. ಹಿರಿಯ ಸಭೆ ಆಶೀರ್ವದಿಸಿತು.

ಸೊನ್ನಲಿಗಿಗೆ ಪ್ರಭುದೇವರು ಆಗಮಿಸಿ, ಸಿದ್ಧರಾಮದೇವರು ಜೀವಿಗಳ ಉದ್ಧಾರಕ್ಕಾಗಿ ನಿರ್ಮಾಣ ಮಾಡುತ್ತಿರುವ ಮಹಾಕ್ಷೇತ್ರವನ್ನು ನೋಡಿ, ಆ ಕಾರ್ಯ ರಚನೆಯನ್ನು ವಿಡಂಬಿಸುವ ರೀತಿಗೆ, ಸಿದ್ಧರಾಮನ ಶಿಷ್ಯರು ಕೋಪಗೊಂಡು ಗುರು ಸಿದ್ಧರಾಮನಿಗೂ ಕೋಪ ಬರುವಂತೆ ಮಾಡಿ, ಶಿವ ಪ್ರಸಾದಿತ ಉರಿಗಣ್ಣನ್ನು ತೆರೆಯುವಂತೆ ಮಾಡುತ್ತಾರೆ. ಪದಾರ್ಥ ಕಾಯವಲ್ಲದೆ, ವ್ಯೋಮಕಾಯನಾದ ಪ್ರಭುದೇವರು, ಅಜ್ಞಾನದ ಸಿದ್ಧರಾಮನ ಉರಿಗಣ್ಣನ್ನು ತಮ್ಮ ಅಂಗಾಲಲ್ಲಿ ಅಡಗಿಸಿಕೊಂಡು, ಅನುಗ್ರಹದ ಕಣ್ಣನ್ನು ಆ ಪಾದಕ್ಕೆರಗುತ್ತಾನೆ. ಶೈವ-ವೀರಶೈವ ತತ್ವ ಚರ್ಚೆಗಳು, ವಿಪುಲವಾಗಿ ನಡೆದು, ಪ್ರಭುದೇವರ ಅನುಗ್ರಹವನ್ನು ಪಡೆದು, ಕಲ್ಯಾಣದಲ್ಲಿ ನಡೆಯುವ ಘಟನೆಗಳನ್ನೊಳಗೊಂಡ, ವಿಸ್ತಾರವಾದ ಶೂನ್ಯ ಸಂಪಾದನೆಯ ಪ್ರವಚನಗಳು ಅತ್ಯಂತ ಜಯಪ್ರದವಾಗಿ ನಡೆದವು.

**ಬಳ್ಳಾರಿಯಲ್ಲಿ ರಾಘವರ ಜಯಂತಿ**

ತೆಲುಗಿನಲ್ಲಿಯೆ ದೊಡ್ಡನಗೌಡರ ಮೊದಲಿನ ವಿಧ್ಯಾಭ್ಯಾಸವಾಗಿದ್ರೂ, ಅನೇಕ ತೆಲುಗುಕಾವ್ಯಗಳನ್ನು ವ್ಯಾಸಂಗ ಮಾಡಿದ್ದರೂ, ಈ ವಯಸ್ಸಿನಲ್ಲಿ ಒದಗಿದ ನೋವು, ಕವನಗಳ ಹೂವಾಗಿ, ವಿಸ್ತಾರವಾಗಿ, ಅರಳಿಬಂದುದು ಇದೇ ಮೊದಲನೇಸಾರಿ. ಸಂತೋಷ ಸಮಾಧಾನವಾದುದೆಂದರೆ, ಸುಮಾರು 50 ಕವನಗಳವರೆವಿಗೂ ಸಾಗಿ, ಚಿಕ್ಕ ಕವನ ಸಂಗ್ರಹವಾಗಿ ಪರಿಣಮಿಸಿದ್ದರಿಂದ, 'ಗೇಯ ಗುಂಜಾರವಮು' ಎಂಬ ಹೆಸರಿಟ್ಟು ಪ್ರಕಟನೆಗಾಗಿ ಸಿದ್ಧಗೊಳಿಸುತ್ತಿರುವಲ್ಲಿ, ಪ್ರತಿವರ್ಷದಂತೆ ಈ ವರ್ಷವೂ ಬಳ್ಳಾರಿಯಲ್ಲಿ "ರಾಘವರ ಜಯಂತಿ" ನಡೆಯುವ ಏರ್ಪಾಡುಗಳು ಆಗಿದ್ದವು. ಸಮಿತಿಯು ಎಲ್ಲಾ ಕಾರ್ಯಗಳನ್ನು ಸಿದ್ಧಗೊಳಿಸಿತ್ತು. ದೊಡ್ಡನಗೌಡರು ನೋವು ನಲಿವಿನ ಈ ಕವನ ಸಾಮ್ರಾಜ್ಯದಲ್ಲಿ, ಕೂತಲ್ಲಿಯೇ ಸಮಾಧಿಸ್ಥನಾಗಿ ಬರೆಯುತ್ತಿದ್ದುದರಿಂದ, ಬಳ್ಳಾರಿಗೆ ಹೋಗಿರಲಿಲ್ಲ. ಈ ಸಲ ಒಂದು ವಿಶೇಷತೆಯು ದೊಡ್ಡನಗೌಡರ ಕಾರ್ಯಕ್ರಮಕ್ಕೆ ಒದಗಿ ಬಂದಿತ್ತು. ರಾಘವಾಚಾರ್ಯರಿಗೆ ಅತ್ಯಂತ ಪ್ರಿಯರಾದ, ಬೆಜವಾಡ ಗೋಪಾಲ ರೆಡ್ಡಿಯವರು ಮುಖ್ಯ ಅತಿಥಿಗಳಾಗಿ ಬರುವವರಿದ್ದರು.

**ಇಂದಿನ ಬಳ್ಳಾರಿ :**

ಅಂದಿಗಿಂತ ಇಂದು ಬಳ್ಳಾರಿ ಬೆಳೆದಿದೆ; ಬೆಳೆಯುತ್ತಿದೆ; ಹದ್ದುಮೀರಿದ ಜನಸಂಖ್ಯೆ. ಬೇಸರ ಬರುವಷ್ಟು ಅಭಿವೃದ್ಧಿ ಹೊಂದುತ್ತಿದೆ. ಇಂದು ಬಳ್ಳಾರಿಯಲ್ಲಿರುವ ಮುಖ್ಯವಾದವುಗಳೆಂದರೆ ಸಿನಿಮಾಗಳು-ಹೋಟಲುಗಳು ಬಳ್ಳಾರಿಯ ಪ್ರಮಾಣಕ್ಕೂ ಮೀರಿ ಬೆಳೆದಿದೆ. ಶಾಲಾ-ಕಾಲೇಜುಗಳು ಇವೆ. ಯಾವ ಕಡೆ ನೋಡಿದರೂ ಮೈಲುಗಟ್ಲೆ - ವಿಸ್ತಾರವಾಗಿ ಸಿಮೆಂಟು ಬಿಲ್ಡಿಂಗುಗಳು ಹರಡಿಕೊಂಡಿವೆ.

ಬಳ್ಳಾರಿ, ಆಂಧ್ರ-ಕರ್ನಾಟಕದ ಸಂಗಮಕ್ಷೇತ್ರ. ವಿಜಯನಗರದ ಸಾಮ್ರಾಜ್ಯಕ್ಕೆ ಸೇರಿದ ಕರ್ನಾಟಕದ ನೆಲೆಯಾದರೂ, ಈ ಹಿಂದೆ ಅದು ಆಂಧ್ರಕ್ಕೆ ಸೇರಬೇಕೆಂಬ ವಿವಾದಗಳು, ಚಳವಳಿಗಳು, ಆ ಮೂಲಕವಗಿ ಇವರು ತೆಲುಗರು, ಇವರು ಕನ್ನಡಿಗರು, ಎಂಬ ವರ್ಗೀಕರಣಗಳು, ಮನಸ್ತಾಪಗಳು, ಜಾತಿ ವಿಭೇದದ ಲಿಂಗಾಯತರು-ಬ್ರಾಹ್ಮಣರು-ರೆಡ್ಡಿಗಳು ಎಂಬ ವಿಭಿನ್ನ ವೃತ್ತಿಗಳು, ಚುನಾವಣೆಗಳ ರಂಗದಲ್ಲಿಯೂ ಸುಳಿದು, ಬ್ರಿಟೀಷರ ಕಾಲಕ್ಕೆ ಮಿಲಿಟರಿಯ ನೆಲೆಯಾಗಿ ದಕ್ಷರಾದ ಯುರೋಪಿಯಮನ್ ಅಧಿಕಾರಿಗಳ ಆಡಳಿತವನ್ನು, ವ್ಯಾಪಾರ ಕೇಂದ್ರತೆಯನ್ನು, ಕೃಷಿ ಪ್ರಾಧಾನ್ಯತೆಯನ್ನು, ಖನಿಜ ಸಂಪತ್ತನ್ನು, ಎಲ್ಲಕ್ಕಿಂತಲೂ ಸಾರಸ್ವತ ವೈಭವವನ್ನು ಪಡೆದಿದ್ದಿತು. ಆಗ ಬಳ್ಳಾರಿ ಜನಸಂಖ್ಯೆಯಿಂದ ಚಿಕ್ಕದಾಗಿ, ಘನತೆ, ಗೌರವ ಪ್ರಕೃತಿ ಸಂಪತ್ತುಗಳಿಮದ ಹಿರಿದಾಗಿತ್ತು.

ಭಾಷೆಗಳ ಕಲಹ, ಜಾತಿಗಳ ಕಲಹ, ರಾಜಕೀಯ ಅಧ್ಯಕ್ಷತೆಯ ಅವ್ಯವಹಾರ, ನಿರಭಿಮಾನಿಗಳ, ನಿರಾದರಣೆಯ, ಪ್ರವೃತ್ತಿಯಿಂದ ರಾಜಕೀಯದ ಗೊಂದಲಗಳೆದ್ದು, ಅವರಿವರ ಎಳೆದಾಟಕ್ಕೆ ಸಿಕ್ಕು, ಮುಖ್ಯವಾದ ಮೂರು ತಾಲ್ಲೂಕುಗಳನ್ನು ಕಳೆದುಕೊಂಡು, ಸ್ವರಾಜ್ಯಾನಂತರ ಕೆಲವು ಕಾಲದಲ್ಲಿಯೇ ಮೈಸೂರು ಕರ್ನಾಟಕಕ್ಕೆ ಬಳ್ಳಾರಿ ಸೇರಿತು. ಆಗ ತೆಲುಗರಿಗೆ ಅಸಮಾಧಾನವೂ ಕನ್ನಡಗರಿಗೆ ಸಮಾಧಾನವೂ ಉಂಟಾಯಿತು.

ಈಗ ಗುಲ್ಬರ್ಗಾ ಡಿವಿಜನ್ ನಿರ್ಮಾಣವಾದಮೇಲೆ ಅದಕ್ಕೂ ಮುಂಚೆ ಮೂರು ತಾಲ್ಲೂಕುಗಳು. ಆಂಧ್ರದಲ್ಲಿ ಸೇರಿದ ನಂತರ. ಬಳ್ಳಾರಿಯ ಭಾಗ್ಯ ಬರಿದಾಯ್ತೆಂಬ

ಅಸಮಾಧಾನದಲ್ಲಿ, ಕನ್ನಡಿಗರೂ–ತೆಲುಗರೂ ಒಂದಾಗುವ ಸೌಭಾಗ್ಯ ಉಂಟಾಯಿತು. ಇಂದು ಅಧಿಕಾರದ ಕೇಂದ್ರವೂ ಅಲ್ಲ, ವ್ಯಾಪಾರ ಕೇಂದ್ರವೂ ಅಲ್ಲ, ಸಾಂಸ್ಕೃತಿಕ ಕೇಂದ್ರವೂ ಅಲ್ಲ. ಯಾತ್ರಿಕರು ಈ ಜಿಲ್ಲೆಗೆ ಸೇರಿದ ಹಾಳಾದ ಹಂಪೆಯನ್ನು, ಉನ್ನತಗೊಂಡ ಪ್ರದೇಶವು ಮರೆಯಾಗಿ–ಹಾಳಾಗಿ, ನಿರ್ಮಾಣಗೊಂಡ ತುಂಗಭದ್ರ ಅಣೆಕಟ್ಟನ್ನು, ಅವುಗಳ ಆಚೆ ಈಚೆಯ ವೈಕುಂಠ–ಕೈಲಾಸ ಗೆಸ್ಟ್ ಹೌಸುಗಳನ್ನು ನೋಡಲು, ಮಜಾಮಾಡಲು ಬಂದು ಹೋಗುತ್ತಾರೆ.

ಆಡಳಿತೆಯ ದೃಷ್ಟಿಯಲ್ಲಿ ಈ ಜಿಲ್ಲೆ ಇಂದು ಪ್ರೋಸ್ಟಾಫಿಸಿನಂತಿದೆ ಅಂದರೆ ಪೋಸ್ಟ್ ಆಫೀಸು ತನ್ನ ಹೆಸರಿಗೆ ಬಂದ ಕಾಗದ ಪತ್ರಗಳನ್ನು ಮತ್ತೊಂದು ಕಡೆ ಆಯಾ ವಿಳಾಸಗಳಿದ್ದಂತೆ, ಬದಲಾವಣೆ ಮಾಡುವ ಅಧಿಕಾರದಂತೆ, ಈ ಜಿಲ್ಲೆಯ ಆಡಳಿತೆಯ ವ್ಯವಹಾರವೆಲ್ಲವು ಇದೆ. ಗುಲ್ಬರ್ಗಾ ಡಿವಿಜನ್ನಿಗೆ, ರಾಜದಾನಿಯಾದ ಬೆಂಗಳೂರಿಗೆ, ಸುತ್ತಿ ಸುತ್ತಿ ಫಲಿತಾರ್ಥವನ್ನು ಬಯಸಿದವರಿಗೆ, ಬೇಜಾರಕ್ಕಿಟ್ಟುಕೊಂಡಿರುವ, ನಿರರ್ಥಕ– ನಿಷ್ಪ್ರಯೋಜಕ ಆಡಳಿತೆಯಾಗಿದೆ. ಬಳ್ಳಾರಿಯ ತುಂಬ ಅಂಗಡಿಗಳೇ. ರಿಬ್ಬನ್ನು, ಹೇರ್‌ಪಿನ್ನು, ರಬ್ಬರ್ ಚಪ್ಪಲಿ ಇತರ ಚಿಲ್ಲರೆಯ ಬಟ್ಟೆಗಳ ಅಂಗಡಿಯ ವ್ಯವಹಾರಗಳು, ಎಲ್ಲಿ ಸಂದಿದ್ದರೆ ಅಲ್ಲಿ ಕಾಫಿ ಹೋಟಲುಗಳು, ಗುಡಿಗುಡರಗಳೇನೋ ಇವೆ. ಸಾಕಷ್ಟು ಲಿಂಗವಂತರ ಮಠಗಳೂ ಇವೆ. ಅವನ್ನು ಯಾವ ಯಾತ್ರಿಕರೂ ನೋಡಲು ಬರುವಂತಹ ಪ್ರಮುಖ ಸ್ಥಾನಗಳಾಗಿಲ್ಲ.

ಇಲ್ಲಿ ಸಾಂಸ್ಕೃತಿಕ ಕೇಂದ್ರಕ್ಕೆ 'ರಾಘವ ಕಲಾಮಂದಿರ'ವು ಇನ್ನೂ ನಾಟಕ ರಂಗಭೂಮಿಗಾಗಿಯೇ ನಿರಾಭರಣ ಸುಂದರಿಯಂತೆ ನಿಂತಿದೆ. ರಾಘವರ ನಂತರ ಹಲವು ವರ್ಷಗಳಿಗೆ ನಿರ್ಮಾಣಗೊಂಡ ಈ ನಾಟ್ಯಭವನ, ಇಡೀ ಕರ್ನಾಟಕಕ್ಕೆ, ಅಷ್ಟೇ ಅಲ್ಲ ದಕ್ಷಿಣ ಭಾರತದಲ್ಲಿ, ನಾಟಕಕ್ಕಾಗಿಯೇ ಉಳಿದ ಭವನವೆಂದು ಹೇಳಬಹುದು. ಇದಕ್ಕೊಂದು 1946 ರಲ್ಲಿ ನಿರ್ಮಾಣಗೊಂಡ ರಿಜಿಸ್ಟರಾದ ಸಂಸ್ಥೆಯೂ ಇದೆ. ಸಂಸ್ಥೆಯಲ್ಲಿಯ ಹಳೆಯ ಜನರು ಈಗಾಲೂ ಉಳಿದಿಲ್ಲ. ಉಳಿದವರೆಂದರೆ ಸದ್ಯ ಇದನ್ನು ಬರೆಯುತ್ತಿರುವಾಗ ನಾನೊಬ್ಬ, ರಾಘವಾಚಾರ್ಯರ ಅಳಿಯಂದಿರಾದ ವೇಣುಗೋಪಾಲಾಚಾರ್ಯರೊಬ್ಬರು. ಇತ್ತೀಚೆಗೆ ಬಂದವರು ಕಮಿಟಿಯಲ್ಲಿ, ಕಮಿಟಿಯ ನಿಯಮಗಳ ಹೆಸರನ್ನು ಉಳಿಸಿಕೊಂಡು ಬಂದವರು ಇದ್ದಾರೆ. ಇಲ್ಲಿ ಕಾರ್ಯಕ್ರಮಗಳು ಸಾರ್ವಜನಿಕವಾಗಿ ಆಗಾಗಿ ನಡೆಯುತ್ತಿವೆ. ನಡೆದ

ಕಾರ್ಯಕ್ರಮಗಳು ಬಳ್ಳಾರಿಗೂ, ಜಿಲ್ಲೆಗೂ, ಅಧಿಕೃತವಾಗಿ, ಕಲಾಭಿವೃದ್ಧಿಗೂ ಕಾರಣವಾಗಿ ಪರಿಣಮಿಸದೇ ಇದ್ದುದು, ಯಾರಿಗಾದರೂ ಕಲಾಭಿರುಚಿಯುಳ್ಳವರಿಗೆ ವಿಷದವೆನಿಸುವಂತಾಗಿದೆ.

ಆರ್ಥಿಕ ಸ್ಥಿತಿಯಿಂದ ಸಂಸ್ಥೆಯು ತೀರ ದುರ್ಬಲ. ಈ ಸಮಿತಿಯ ಪ್ರಾರಂಬಕ್ಕೆ ನಾನೇ ಅಧ್ಯಕ್ಷನಾಗಿದ್ದು, ಹಲವು ಹಿರಿಯರ, ಅಧಿಕಾರಿಗಳ, ರಾಘವರ ಅಭಿಮಾನಿಗಳ, ಸಹಕಾರವನ್ನು ಪಡೆದು ನಮ್ಮ ಸಮಿತಿಯೊಂದಿಗೆ, ಭವನ ನಿರ್ಮಾಣದ ನಿಧಿಗಾಗಿ, ನಾಟಕ ಪ್ರದರ್ಶನಗಳನ್ನು ಮಾಡಿ ಅಂದಿನ ಕಾಲದಲ್ಲಿ ಹನ್ನೊಂದು ಸಾವಿರದಷ್ಟು ನಿಧಿಯನ್ನು ಕೂಡಿಸಲಾಯಿತು. ಇತರ ಕಡೆಳಿಂದ, ನಮ್ಮ ಸಮಿತಿಯವರಿಂದ, ಕೊಂಚ ನಿಧಿಯು ಅದಕ್ಕೆ ಕೂಡಿತು. ಪ್ರಿನ್ಸಿಪಾಲ್ ವೀರಶೈವ ಕಾಲೇಜ್ ಛಾಯಪ್ಪನವರು, ನಿಪ್ಪಾಣಿ ವೆಂಕಟರಾಯರು, ಸಮಿತಿಯ ಕಾರ್ಯದರ್ಶಿಗಳಾಗಿ ದುಡಿದುದರಿಂದ, ಹಾಗೂ ಹೀಗೂ ಆಂಧ್ರ-ಕರ್ನಾಟಕ ಅವಾಂತರಗಳನ್ನು ದಾಟಿ, ಭವನದ ಶಂಖುಸ್ಥಾಪನೆ ಯವರಿವಿಗೂ ನಾನಿದ್ದು ಮುಂದಿನ ಕಾರ್ಯ ವೈಸ್‌ಪ್ರೆಸಿಡೆಂಟರಾಗಿದ್ದ ಹೆಚ್. ಲಿಂಗಾರೆಡ್ಡಿಯವರಿಗೆ ವಹಿಸಲಾಯಿತು. ನಮ್ಮ ಸಂಸ್ಥೆಯ ಖಜಾಂಚಿ ಮುಲ್ಲಂಗಿ ಗೂಳಪ್ಪನವರು, ವ್ಯವಹಾರ ಕುಶಲರು. ಕೂಡಿದ ಹಣವನ್ನು ಹೆಚ್ಚಿನ ಬಡ್ಡಿ ದೊರೆಯುವಂತಹ ರೀತಿಯಲ್ಲಿ ಬೆಳೆಸಿಕೊಂಡು ಬಂದರು. ಲಿಂಗರೆಡ್ಡಿಯವರ ಸಾಹಸದೊಂದಿಗೆ ನಮ್ಮ ಸಮಿತಿಯವರ ಅಭಿಪ್ರಾಯದಂತೆ, ಕಟ್ಟಡಕ್ಕೆ ಬೇಕಾದ ಧನಸಂಗ್ರಹ ಮಾಡಿಕೊಳ್ಳುತ್ತ, ಕಂಪ್ಲಿ ಶುಗರ್ ಫ್ಯಾಕ್ಟರಿಯ ಚೆರಮೆನ್ನಾರಾಗಿ ಕೆಲಸ ಮಾಡುತ್ತಿದ್ದ ಲಿಂಗಾರೆಡ್ಡಿಯವರು, ಆ ಫ್ಯಾಕ್ಟರಿಯಿಂದ ಐವತ್ತುಸಹಸ್ರ ರೂಪಾಯಿಗಳ ನೆರವನ್ನು ಪಡೆದರು. ಸ್ಥಾನಿಕ ಮುನ್ಸಿಪಾಲ್ಟಿಯಿಂದಲೂ, ರಾಜ್ಯ ಸರಕಾರದಿಂದಲೂ, ಸಹಾಯವನ್ನು ಪಡೆದು, ಈಗಿರುವ ಭೂಮಿಗಿಳಿಸಿದ ಭಗೀರಥನ ಪ್ರಯತ್ನವು ನೆನಪಾಗಿ, ಕಡೆಗೊಮ್ಮೆ ಬಳ್ಳಾರಿಯಲ್ಲಿ ಹಿಂದಿನವು, ಸ್ಮರಣೀಯವಾದ ಸ್ಮಾರಕಗಳು ಇಲ್ಲದಿದ್ದರೂ ನನ್ನ ಗುರು ರಾಘವರ ಹೆಸರಿನಿಂದ ಈ ಭವನ ನಿರ್ಮಾಣವಾದುದು, ನನಗಂತೂ ಸಂತೋಷವಾಯಿತು. ನಮ್ಮ ಸಮಿತಿಯವರಿಗೂ ಬಳ್ಳಾರಿಯವರಿಗೂ ಹೆಮ್ಮೆ ಎನಿಸಿತು.

ಅದು ಪ್ರಾರಂಭಗೊಂಡಾಗಿನಿಂದ ಸಾಕಷ್ಟು ವ್ಯಾಪಕವಾಗಿ, ಥಿಯೇಟರಿಗೆ ಬೇಕಾದ ಸಲಕರಣೆಗಳಿಲ್ಲದೆ, ನಾಟಕವಾಡುವವರಿಗೆ ದುಬಾರಿಯ ಬಾಡಿಗೆಯಾಗಿ, ವೃತ್ತಿ ನಾಟಕ ಸಂಸ್ಥೆಗಳು ಯಾವುವೂ ಇಲ್ಲಿಗೆ ಬಾರದೆ, ಬೇರೆಕಡೆ ನಾಟಕಗಳನ್ನು ಪ್ರದರ್ಶಿಸುತ್ತಿರುವುದು ಒಂದು ವಿಷಾದಾಕರವೇ ಆಗಿದೆ. ಆದರೂ ಬೇರೊಬ್ಬರ ನೆರವನ್ನು ಪಡೆದು ಕರ್ಟನ್ಸ್-ಕುರ್ಚಿಗಳಿಗಾಗಿ, ಆಗಾಗ ಪ್ರದರ್ಶನಕ್ಕೆ ಬಂದ ಮೊತ್ತದಲ್ಲಿ ಮುಕ್ಕಾಲು ಭಾಗ ಉಪಕರಣಗಳು ನೀಡಿದವರಿಗಾಗಿ, ಕಾಲುಭಾಗ ಥಿಯೇಟರಿಗಾಗಿ ಪಡೆಯುವ ದೀನಸ್ಥಿತಿಯುಂಟಾಗಿದೆ.

**ನಾಟಕ ಪರಿಷತ್ತು**

ಬೆಂಗಳೂರಲ್ಲಿ ಅಖಿಲ ಕರ್ನಾಟಕ ನಾಟಕ ಪರಿಷತ್ತು ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ನಡೆಯುತ್ತಿದ್ದುದು. ಅದರಲ್ಲಿ ದೊಡ್ಡನಗೌಡರು ಭಾಗವಹಿಸುವ ಕಾರ್ಯಕ್ರಮವೂ ಇತ್ತು. ಉದಯದಲ್ಲಿ ಪ್ರಾರಂಭವಾದ ಪರಿಷತ್ತಿಗೆ ದೊಡ್ಡನಗೌಡರು ಹೋಗಲಿಲ್ಲ. ಸಾಯಂಕಾಲ ಗೌಡತಿಯೊಂದಿಗೆ ಪರಿಷತ್ತಿಗೆ ಹೋದೆ. ಗೌಡತಿಯು ಇಂತಹ ಪರಿಷತ್ತುಗಳು, ಸಂಗೀತ ಸಮಾರಂಭಗಳನ್ನು, ಹೊರಗೆ ಬಂದು ನೋಡಿರಲಿಲ್ಲ. ಮನೆಯಲ್ಲಿ ದೊಡ್ಡನಗೌಡರೇ ಆಕೆಗೆ ಇಂತಹವೆಲ್ಲಾ ಆಗಿದ್ದೆ. ಅಂದಿನ ಸಾಯಂಕಾಲದ ಕಾರ್ಯಕ್ರಮ ನಡೆದುದರಲ್ಲಿ ಮುಖ್ಯವಾಗಿ, ಹಳೆಯ ಪರಂಪರೆಯಲ್ಲಿ ಸಾಗಿಬಂದ ಚಿಕ್ಕ ಚಿಕ್ಕ ನಾಟಕ ದೃಶ್ಯಗಳಿದ್ದವು. ಆ ಸಂಪ್ರದಾಯದಲ್ಲಿರುವವರು, ಹಿರಿಯ ವಯಸ್ಸಾದ ಕಲಾವಿದರು, ಇನ್ನು ಉಳಿದಿದ್ದರು. ಆ ಕಾಲದ ಅಂದರೆ ವರದಾಚಾರ್ಯರ ಕಾಲದಿಂದ, ಗುಬ್ಬಿ ವೀರಣ್ಣ, ಸುಬ್ಬಯ್ಯ ನಾಯ್ಡು, ನಾಗೇಂದ್ರರಾಯರು ಮುಂತಾದ ಹಳೆಯ ವರ್ಗದ ದೃಶ್ಯಗಳಲ್ಲಿ ಅರವತ್ತರಿಂದ ಹಿಡಿದು, ಎಂಭತ್ತೈದು ವರ್ಷಗಳವರೆವಿಗೂ, ವಯಸ್ಸಾದ ನಟುರು, ವಾದ್ಯಗಾರರು ಭಾಗವಹಿಸದ್ದು, ಕಿರಿಯರಿಗೂ ಸ್ಫೂರ್ತಿದಾಯಕವಾಗಿತ್ತು. ಅಂದಿನ ವೇಷ ಭೂಷಣಗಳು, ಮಾತುಗಾರಿಕೆ, ಹಾಡುಗಳ ಗತ್ತುಗಳೂ, ವಾದ್ಯಗಳ ವಾದನಗಳೂ, ಕೇಳಿದವರ ಉತ್ಸಾಹವು ಹೆಚ್ಚಿ ಕುಳಿತಲ್ಲಿಯೇ ಕುಣಿದಾಡಬೇಕೆನಿಸುವಂತಾಯಿತು.

ಬಹಳಷ್ಟು ಮುಂದುವರಿದ ರಂಗಭೂಮಿಯಾಗಿ ಇಂದು ಪ್ರದರ್ಶಿತವಾಗುತ್ತಿರುವ ನಾಟಕಗಳು. ಎಷ್ಟೊಂದು ನೀರಸವೆನಿಸುವಂತಾಯಿತು. ಗೌಡತಿಯು ತುಂಬಾ ಮೆಚ್ಚಿಕೊಂಡು "ನಾಟಕವೆಂದರೆ ಹೀಂಗಿರಬೇಕು" ಎಂದು ತನ್ನ ಮೆಚ್ಚಿಕೆಯನ್ನು ತೋರಿದಳು. ಕೂಡಿದ ಸಭೆ ತುಂಬಾ ಉಲ್ಲಾಸಗೊಂಡಿತು.

ಮರುದಿನ ನಾಟಕ ಗೋಷ್ಠಿಗಳಲ್ಲಿ ಉದಯ ಭಾಗವಹಿಸಿದೆ. ಬಹು ಜನರು ನಾಟಕದ ಬಗ್ಗೆ, ಬಹಳಷ್ಟು ಚರ್ಚೆಗಳು ನಡೆದವು. ನನ್ನ ಪಾಲಿಗೆ ಬಂದ ವಿಷಯ "ರಂಗ ಭೂಮಿಯ ಇಂದಿನ ಸಮಸ್ಯೆ". ಇನ್ನೂ ನನಗವಕಾಶ ಬಂದಿರಲಿಲ್ಲ. ಮುಂದೆ ಮಾತನಾಡಬೇಕಾದ ಈ ಸಮಸ್ಯೆ". ಇನ್ನೂ ನನಗವಕಾಶ ಬಂದರಲಿಲ್ಲ. ಮುಂದೆ ಮಾತನಾಡಬೇಕಾದ ಈ ಸಮಸ್ಯೆಗೆ, ಮಾತನಾಡಿದವರ ಭವನದಲ್ಲಿ ಕೂತ, ಫ್ಯಾನಿನ ಗಾಳಿಯಲ್ಲಿ ಕೂಡಾ ಸೆಕೆಯು ವಿಪರೀತವಾಗಿ, ಜೋಳದರಾಶಿ ದೊಡ್ಡನಗೌಡರ ತಲೆ ದಿಮ್ಮು ಹಿಡಿಯಿತು. ಅದರಲ್ಲಿ ದ್ವಾದಸಿ ಪಾರಣೆ ಮಾಡಿ ಬಂದ, ಮಾಧ್ವ ಮಹಾಬ್ರಾಹ್ಮಣರೊಬ್ಬರು ಚೆನ್ನಾಗಿ ಊಟ ಮಾಡಿ ಬಂದಿದ್ದರಿಂದ, ಬಿಸಿಲಿನ ಸಮಸ್ಯೆಯಾಗಲಿ, ಅವರಿಗಿರಲಿಲ್ಲ. ಯಾವ ಗೊಡವೆಯೂ ಇಲ್ಲದ ಆ ಮಹಾಬ್ರಾಹ್ಮಣ! ಒಂಟೆತ್ತಿನ ಗಾಡಿಯಂತೆ ತನ್ನ ಭಾಷಣವನ್ನು ಸಾಗಿಸಿದ್ದ. ಈತನ ಭಾಷಣವನ್ನು ಬಿಡಿಸುವ ಸಮಸ್ಯೆಯೂ, ಒಂದು ಸಮಸ್ಯೆಯಾಗಿ ಎಲ್ಲರಿಗೂ ಪೇಚಾಟಕ್ಕಿಟ್ಟುಗೊಂಡಿತು. ಆಗ ಮಧ್ಯಾನ್ನ ಎರಡು ಗಂಟೆ. ಹಸಿವಿನ ಪೇಚಾಟಕ್ಕೊಳಗಾದ ದೊಡ್ಡನಗೌಡರು, ತಾಳ್ಮೆಗೆಟ್ಟು ಎದ್ದು ಕೈಮುಗಿದು ಹಸಿವನ್ನು, ಆದ ಸಮಯವನ್ನು ಸೂಚಿಸಿ, ಮೇಲೆ ಕ್ಷಮಿಸಿಬೇಕೆಂದು ಕೋರಿ ದೊಡ್ಡನಗೌಡರ ಸಮಸ್ಯೆಯ ಭಾಷಣ ಇದ್ದ ಉಸಿರಿನಲ್ಲಿಯೆ ಮುಗಿಸಿ ಮತ್ತೊಮ್ಮೆ ಕೈಮುಗಿದು "ಬದಿಕಿದೆಯಾ ಬಡಜೀವ" ಎಂದು ಗೌಡತಿಯೊಂದಿಗೆ ಚಂದ್ರಶೇಖರಪ್ಪನವರ ಮನೆಗೆ ಬಂದು ಊಟ ಮಾಡಿ ಮಲಗಿಬಿಟ್ಟೆ. ಮತ್ತೆ ಸಾಯಂಕಾಲ ಪರಿಷತ್ತಿಗೆ ಹೋಗಲೇ ಇಲ್ಲ. ಬಿಸಿಹಾಲು ಕುಡಿದ ಬೆಕ್ಕಿನಂತೆ ದೊಡ್ಡನಗೌಡರ ಸ್ಥಿತಿಯಾಗಿತ್ತು. ಗೌಡತಿಗಂತು ಬ್ಲಡ್ ಪ್ರೆಶರ್, ತುಂಬಾ ಬೇಜಾರಾಗಿದ್ದಳು. ಮತ್ತೆಲ್ಲಿ ದೊಡ್ಡನಗೌಡರು ಕರೆದುಕೊಂಡು ಹೋಗುತ್ತಾರೋ ಎಂದು ಅಂಜಿ "ನಾನಲ್ಲಿಗೆ ಬರಲಾರೆ" ಎಂದಳು. "ಈಗ ದೊಡ್ಡನಗೌಡರು ನಿನ್ನನ್ನು ಕರೆದೂ ಇಲ್ಲ. ದೊಡ್ಡನಗೌಡರೇ ಹೋಗುತ್ತೇನೆಂದೂ ಹೇಳಲಿಲ್ಲ. ನಿನಗಾದಂತೆ ದೊಡ್ಡನಗೌಡರಿಗೂ ಆಗಿದೆ. ಇನ್ನೆಲ್ಲಿಗಾದರೂ ಹೋಗೋಣ" ಎಂದು ನಕ್ಕು ನಾವು ಮಾತನಾಡುತ್ತಿರುವಾಗ ಷಣ್ಮುಖಪ್ಪ

ಬಂದು ಹೇಳಿದ. ಈ ಹೊತ್ತು ಸಾಯಂಕಾಲ ಎಂ.ಎಸ್. ಸುಬ್ಬಲಕ್ಷ್ಮಿಯವರ ಸಂಗೀತ ಕಚೇರಿ ಇದೆ. ಅದು ನಮ್ಮ ಮನೆಗೆ ಸಮೀಪ. ಸಂಗೀತ ಕೇಳಿ ನಮ್ಮ ಮನೆಯಲ್ಲಿ ಊಟಮಾಡಿ ಬರಬಹುದು" ಎಂದು ಕರೆದಾಗ ನಮ್ಮಿಬ್ಬರಿಗೂ ಸಂತೋಷವಾಯಿತು. ನಾನಿದುವರೆಗಿಗೂ ಶ್ರೀಮತಿ ಸುಬ್ಬಲಕ್ಷ್ಮಿಯವರ ಸಂಗೀತವನ್ನು ರೇಡಿಯೋದಲ್ಲಿ ಕೇಳಿ ಆನಂದಗೊಂಡಿದ್ದೆ. ಅವರನ್ನು ನೋಡಿರಲಿಲ್ಲ. ಆ ಸುಯೋಗ ಇಂದು ದೊರೆಯುವಂತಾಯಿತು.

**4.4. ಪ್ರಶಸ್ತಿ–ಸನ್ಮಾನ ಪುರಸ್ಕಾರಗಳು**

**ಸಂಗೀತ – ನಾಟಕ ಅಕಾಡೆಮಿಯ ಪ್ರಶಸ್ತಿ**

ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿಯವರು 02.11.1966ರಂದು ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ, ನಾಟಕ ಕಲಾಪ್ರಶಂಸೆಯೊಂದಿಗೆ ನಟರಾಜ–ಜೋಡಿಶಾಲು – ನಿಧಿಯೊಂದಿಗೆ ಪ್ರಶಸ್ತಿ ನೀಡಿದ್ದು ಡಾ॥ ಜೋಳದರಾಶಿ ದೊಡ್ಡನಗೌಡ ಕಲಾ ಪ್ರಚೋದನೆಗೆ ಸಹಾಯ ನೀಡಿತು. ಅಂದೇ ಕನಕದಾಸ ನಾಟಕದ ಕೊನೆಯ ಭಾಗ ಪ್ರದರ್ಶಿತವಾಗಿ ಮೆಚ್ಚಿಗೆ – ಗೌರವಗಳನ್ನು ಪಡೆಯುವಂತಾಯಿತು.

ದೊಡ್ಡನಗೌಡರು ತಮ್ಮದು ನಾಡಸೇವೆಯೆಂದು ಭಾವಿಸಿದ್ದರು. ನಾಟಕ–ಗಮಕ–ಪ್ರವಚನಗಳ ಮೂಲಕ ನಾಡಿನ ಮೂಲೆ ಮೂಲೆಗೆ – ಸಂಸ್ಕೃತಿಯ ಸವಿಯನ್ನು ಹಂಚಿದರು. ಪ್ರತಿವರ್ಷದ ಡೈರಿಯ ಆರಂಭದಲ್ಲಿ 'ನಟರಾಜ, ಕಳೆದ ವರ್ಷದಂತೆ ಈ ವರ್ಷವೂ ನಾಡಸೇವೆಯಲ್ಲಿ ಈ ದೇಹ ಸವೆಸುವಂತೆ ಕೃಪೆ ಮಾಡು' ಎಂದು ಬೇಡಿಕೊಂಡಿದ್ದಾರೆ. ಹಾಗೆ ಅವರು ಮಾಡಿದ ನಿಸ್ವಾರ್ಥ ಸೇವೆಯನ್ನು ನಾಡು ಗುರುತಿಸಿತು, ಗೌರವಿಸಿತು.

ದೊಡ್ಡನಗೌಡರನ್ನು ಸಾಮಾನ್ಯವಾಗಿ 'ಗಮಕಕಲಾನಿಧಿ ದೊಡ್ಡನಗೌಡರು' ಎಂದೇ ಜನತೆ ಗುರುತಿಸುತ್ತಿತ್ತು.

### 4.5. ಜೀವನದ ಸಿಹಿ – ಕಹಿ

ಮಾನವ ಜೀವನ ತೂಗುಯ್ಯಾಲೆಯಂತೆ, ಆ ಕಡೆ, ಈ ಕಡೆ, ಏರುಪೇರುಗಳಿಂದ ಒಂದು ಸಮತೆಯಿಲ್ಲದ, ಸಮಾಧಾನವಿಲ್ಲದ ಹೋರಾಟ. ಒಂದು ಕಡೆ ಸುಖವೆಂದು ನಲಿದಾಡುವಾಗ, ಮತ್ತೊಂದುಕಡೆ ದುಃಖದ ಸಂತಪ್ತತೆಯ ತೊಳಲಾಟ. ಈಸ್ಥಿತಿಯನ್ನು ಸಮಾನಾಗಿ ನಿಲ್ಲಿಸುವ, ಸಾಗಿಸುವ ಕಾರ್ಯ, ಇದುವವರೆಗೂ ಮನುಷ್ಯನ ಚರಿತ್ರೆಯಲ್ಲಿ ದುರ್ಘಟವಾಗಿಯೇ ನಿಂತಿದೆ.

ದೊಡ್ಡನಗೌಡರ ಜೀವನದಲ್ಲಿ ಈ ರೀತಿಯ ತೂಕ ತಪ್ಪಿದ, ಅಳತೆಗೆ ಬಾರದ ತೊಡುಕುಗಳು, ದುಮ್ಮಾನಗಳು, ನಡೆದು ಹೋಗಿವೆ; ನಡೆಯುತ್ತಿವೆ. ಅದರಲ್ಲಿ ನನ್ನ ಸಂಸಾರಿಕ ಚಿಂತೆಗಳು ಏನಿದ್ದರೂ, ದೊಡ್ಡನಗೌಡರು ಕಲಾಪ್ರಪಂಚದ ಆಧಾರಸ್ತಂಭಗಳಾಗಿ, ಮಾರ್ಗದರ್ಶನದ ಸೂಚಿಗಳಾಗಿ, ಜೀವನದುದ್ದಕ್ಕೂ ಪರಮ ಮಿತ್ರರಾಗಿ, ಆಗಲಿ ಹೋದ ದೊಡ್ಡನಗೌಡರ ವಿಷಯಕವಾಗಿ ಪೂರ್ವಭಾಗದಲ್ಲಿ ಕೆಲವನ್ನು ಹೇಳಲಾಗಿದೆ. 1970 ರಲ್ಲಿ ಅಲ್ಲಿ ಇಲ್ಲಿ ನಡೆದ ಸಮಾರಂಭಗಳು, ಸಂತೋಷಗಳು, ಸನ್ಮಾನಗಳು ನಡೆದುದೇನೋ ನಡೆದವು. ಆ ಸನ್ಮಾನಗಳು, ನಾಡಿನ ಹಿರಿಯರು ನೀಡಿದ ಆರ್ಶಿವಾದಗಳು. ಇದೆಲ್ಲಾ ನಡೆಯುತ್ತಿರುವಾಗ ಕಾಲ ವೈಚಿತ್ರ್ಯ, ಬಳ್ಳಾರಿಯ ಕಾವ್ಯ ತೀರ್ಥ ರಾವಾಡ ವೆಂಕಟರಾಮ ಶಾಸ್ತ್ರಿಗಳು, ನಿಧನರಾದರೆಂಬ ವಾರ್ತೆ ಕೇಳಿ ವಿಷಾದವಾಯಿತು.

ರಾವಾಡ ವೆಂಕಟರಾಮ ಶಾಸ್ತ್ರಿಗಳು, ವಾಡ್ಲಾ ಹೈಸ್ಕೂಲು ತೆಲುಗು ಪಮಡಿತರಾಗಿದ್ದು, ನಿವೃತ್ತರಾಗಿದ್ದರು. ಇವರು ನಾಟಕಕರ್ತರಾದ, ಕೋಲಾಚಲಂ ಶ್ರೀನಿವಾಸರಾಯರ ಒಡನಾಟದಲ್ಲದ್ದರೆಂದು ಕೇಳಿ ಬಲ್ಲೆ. ಅವರು ಹಾಗೂ ಪಂಡಿತ ವೈ. ನಾಗೇಶ ಶಾಸ್ತ್ರಿಗಳೂ ಒಂದೇ ಕಡೆ ಕೆಲಸ ಮಾಡಿದವರು. ಸಾಹಿತ್ಯವೆಂದರೆ, ಸಂಗೀತವೆಂದರೆ, ನಾಟಕವೆಂದರೆ, ಅತ್ಯಂತ ಆಸಕ್ತಿ ಆದರಣೆಯುಳ್ಳವರು. ಹಿರಿಯಸ್ಥಾನದಲ್ಲಿದ್ದರೂ, ವಯಸ್ಸಾಗಿದ್ದರೂ, ಕಿರಿಯರೊಂದಿಗೆ ಕಿರಿಯರಾಗಿ, ಸಹೃದಯತೆಯಿಂದ ವರ್ತಿಸುವ ಸರಳ ಜೀವಿಗಳು.

ರಾಘವಾಚಾರ್ಯರು ಬಳಗದಲ್ಲಿ, ಅವರೊಬ್ಬ ಪಂಡಿತಮಾನ್ಯರು, ನಾಟಕದಲ್ಲಿ ಶಾಸ್ತ್ರೀಯವಾದ ವಿಚಾರ ಬಂದಾಗ, ಅದನ್ನು ಪಾತ್ರಕ್ಕೆ ತಂದುಕೊಂಡು ಅಭಿನಯಿಸುವಾಗ, ಅನೇಕಸಲ ಆಚಾರ್ಯರು ಇವರ ಸಲಹೆಯನ್ನು ಪಡೆಯುತ್ತಿದ್ದರು. ಆಗಾಗ ಭಾಸ್ಕರಾಚಾರ್ಯ ರಾಮಚಂದ್ರ ಸ್ವಾಮಿಗಳನ್ನು ಪಂಡಿತ ವೈನಾಗೇಶ ಶಾಸ್ತ್ರಿಗಳನ್ನು ಕೇಳಿ, ತಮ್ಮ ಸಂದೇಹಗಳಿಗೆ, ಸಮಾಧಾನವನ್ನು ಪಡೆಯುತ್ತಿದ್ದರು. ಇನ್ನೊಬ್ಬರು, ಕಪ್ಪಗಲ್ಲು ಸಂಜೀವಮೂರ್ತಿರಾಯರು. ಅವರು ಉತ್ತಮ ಕವಿಗಳು ನಾಟಕಕಾರರೂ ಆಗಿದ್ದು, ಈ ಪಂಡಿತ ಮಂಡಳಿಯಲ್ಲಿ ಆಗಾಗ ಸೇರಿ, ಚರ್ಚೆಗಳನ್ನು ನಡೆಯಿಸುತ್ತಿದ್ದರು. ರಾವಾಡ ವೆಂಕಟರಾಮ ಶಾಸ್ತ್ರಿಗಳು "ಪ್ರಭಾವತಿ ಪ್ರದ್ಯುಮ್ನ" ಎಂಬ ಕಾವ್ಯವನ್ನು ತಲುಗಿನಲ್ಲಿ ರಚಿಸದ್ದರು. ತಮ್ಮ ಬಾಳುವೇಯೇನೋ ಅದರ ರೊರತೆಯೇನೋ ಒಂದು ದಿನವೂ ಯಾರ ಮುಂದೆಯೂ ಹೇಳಿಕೊಳ್ಳುವ ಸ್ವಭಾವ ಅವರದಾಗಿರಲಿಲ್ಲ. ದೊಡ್ಡನಗೌಡರು ಕಂಡಾಗಲಂತೂ ಅವರು ಅತ್ಯಂತ ಪ್ರೇಮಾದರಗಳನ್ನು ತೋರಿ, ಕಾವ್ಯಾಲಾಪನೆಯನ್ನು ಮಾಡುತ್ತಿದ್ದರು.

ಕಾವ್ಯ ಚರ್ಚೆಗೆ ಮನೆಯೆಂಬುದಿಲ್ಲ ರಸ್ತೆಯೆಂಬುದಿಲ್ಲ. ಎಲ್ಲಿ ಕಂಡರಲ್ಲಿ ಕಾಳಿದಾಸ, ಭವಭೂತಿ, ಭಾಸ, ಇತರ ತೆಲುಗು ಕವಿಗಳ ಚರ್ಚೆ ನಡೆಯುತ್ತಿರುವಾಗ, ರಸ್ತೆಯ ವಾಹನಗಳಾಗಲಿ, ಜನರಿಗಾಗಲಿ, ಹಾದಿಬಿಟ್ಟು ನಿಲ್ಲುವ ಎಚ್ಚರವಿರುತ್ತಿರಲಿಲ್ಲ. ಯಾರಾದರೊಬ್ಬರು ಗದರಿಸಿದಾಗಲೇ ಎಚ್ಚತ್ತು "ಅಯ್ಯೋ ನೋಡಪ್ಪಾ! ಹಾದ್ಯಾಗ ನಿಂತು ಹಿಂಗ ಮಾತಾಡುತ್ತಾಯಿದ್ದರೆ ಬೈಯ್ದುಯಿರ್ತಾರೇನಪ್ಪಾ" ಎಂದು ನಕ್ಕು ನಮ್ಮ ನಮ್ಮ ಕೆಲಸಕ್ಕೆ ಮುಂದೆ ಹೋಗುತ್ತಿದ್ದೆವು.

ರಾಘವಾಚಾರ್ಯರು ದಿವಂಗತರಾದ ತರುವಾಯ, ಶಾಸ್ತ್ರಿಗಳು ಕಣ್ಣು ತುಂಬ ನೀರಿಟ್ಟು, ಯಾವಾಗಲಾದರೂ ಜೋಳದರಾಶಿ ದೊಡ್ಡನಗೌಡರು ಕಂಡಾಗ "ನೋಡಪ್ಪಾ! ಈಗ ನಮ್ಮನ್ನು ಯಾರು ಕೇಳಬೇಕು. ದೊಡ್ಡಾತ ರಾಘವಾಚಾರಿ ಹೋಗ್ಬಿಟ್ಟ. ಭಂಡ ಜನ್ಮ ದೊಡ್ಡನಗೌಡರು ಬದುಕಿದ್ದೀನಿ" ಕೃಷ್ಣದೇವರಾಯ ಹೋದ ತರುವಾಯ, ಆ ರಾಯನನ್ನು ನೆನದುಕೊಂಡು, ಅಲಸಾನಿಪೆದ್ದನು ಹೇಳಿಕೊಂಡ "ಎದುರ್ಕೈನಜೋ ತನ ಮದಕರೀಂದ್ರ ಮುಡಿಗ್ಗಿ" ಎಂಬ

ಪದ್ಯವನ್ನು ಹೇಳಿ" ಹೀಂಗೆ ನೋಡಪ್ಪಾ! ಹಾದಿಯಲ್ಲಿ ಎಲ್ಲಿ ಕಂಡರೆ ಅಲ್ಲಿ, ಕಾರಿನಲ್ಲಿ ಕೂಡಿಸಿಕೊಂಡು ಹೋಗುತ್ತಿದ್ದ ಪುಣ್ಯಾತ್ಮ, ಎಂದು ಸ್ಮರಿಸಿಕೊಳ್ಳುತ್ತಿದ್ದರು.

ಅವರೊಂದಿಗೆ ಅನೇಕ ಸಮಯಗಳಲ್ಲಿ ಕೂಡಿದ್ದು, ಕಾರ್ಯಕ್ರಮಗಳಿಗೆ ಹೋದದ್ದೆಲ್ಲಾ ಇಲ್ಲಿ ಹೇಳುವುದಕ್ಕಿಂತ, ಕೊನೆಯಲ್ಲಿ ನಡೆದ ಒಂದು ವಿಷಯವು ಮರೆಯಲಾದಿದ್ದುದೆಂದರೆ; ಒಂದು ದಿನ ಸತ್ಯನಾರಾಯಣ ಪೇಟೆಯಲ್ಲಿ, ಅವರ ಮಗಳ ಮನೆಯಲ್ಲಿರುವುದು ತಿಳಿದು, ಆ ಕಡೆ ಕೆಲಸವಿದ್ದುದರಿಂದ ಆ ಕೆಲಸ ನೋಡಿಕೊಂಡು, ಅವರಲ್ಲಿಗೆ ಹೋದೆ. ಅವರೆಲ್ಲಿಗೋ ಹೊರಗೆ ಹೋಗುವಂತಿತ್ತು. ದೊಡ್ಡನಗೌಡರನ್ನು ನೋಡದೆ, ಕಾಲ ಹೆಂಗಾಯ್ತು ನೋಡಪ್ಪ! ಬದುಕಿದ್ದೋರು ಒಬ್ಬರಿಗೊಬ್ಬರು, ಭೆಟ್ಟಿಯಾಗುವಂತಿಲ್ಲ. ಸತ್ತವರು ಮತ್ತೆ ಬರುವಂತಿಲ್ಲ. ಹೇಗಪ್ಪ ಜೀವನ ಸಾಗಿಸೋದು" ಎಂದು ನಗುತ್ತಾ, ಆಮಾತು ಈಮಾತು, ಆಕಾವ್ಯ, ಈಕಾವ್ಯ, ಆಕವಿ, ಈಕವಿ, ಅವರ ಬರಹಗಳು, ಅವರ ಪ್ರಶಂಸೆಗಳು, ಮಾತನಾಡುವಲ್ಲಿಯೇ ಬಹಳ ಹೊತ್ತಾಯಿತು.

ಅಷ್ಟೊತ್ತಿಗೆ ಅವರ ಮನೆಯವರು ಹೊರಗೆ ಹೋದವರು ಬಂದರು. "ಏನು ತಾವು ಬರಲಿಲ್ಲ ಎಂದು ಕೇಳಿದರು. ಶಾಸ್ತ್ರಿಗಳು ಆಗ ಎಚ್ಚತ್ತು, "ಹೋ-ಹೋ ಅದಕ್ಕೋ-ಗೌಡರು ಬಂದಿದ್ದರು, ಅವರೊಡನೆ ಮಾತನಾಡುತ್ತ ಕೂತೆ" ಎಂದಾಗ ದೊಡ್ಡನಗೌಡರು "ಎಲ್ಲಿಗೆ ಹೋಗಬೇಕಾಗಿತ್ತು"? ಎಂದು ಕೇಳಿದೆ. "ಇವತ್ತು ಶಂಕರ ಜಯಂತಿ ಅಲ್ಲೇನಪ್ಪ! ಹೋಗಬೇಕಾಗಿತ್ತು" ಅಂದಾಗ "ದೊಡ್ಡನಗೌಡರಿಗೆ ಗೊತ್ತಿರಲಿಲ್ಲ ಶಾಸ್ತ್ರಿಗಳೇ ಅದಕ್ಕೆ ವಿಘ್ನವಾಗಿ ನಾನು ಬಂದೆ" ಎಂದು ಅಸಮಾಧಾನಗೊಂಡಾಗ, "ನೋಡಪ್ಪ! ದೊಡ್ಡನಗೌಡ! ನಾವೀಗ ಸ್ನೇಹ ಸೌಹಾರ್ದತೆಯಿಂದ, ಉತ್ತಮ ವಿಚಾರಗಳನ್ನು ಮಾತಾಡಿದ್ದೂ, ಶಂಕರ ಜಯಂತಿ ಅಲ್ಲೇನು?" ಎಂದು ಕೇಳಿದಾಗ ದೊಡ್ಡನಗೌಡರು ಮೂಕನಾದರು. ಬಹಳ ದೊಡ್ಡಮಾತು. ನಿಜವಾದ ಶಂಕರಜಯಂತಿಯನ್ನು ಇಂದು ಆಚರಿಸಿದೆವೆಂಬ ಅವರ ಉತ್ಸಾಹಕಂಡು, ಅವರಿಂದ ಬೀಳ್ಕೊಂಡು ಬಂದೆ. ಕೆಲವು ದಿನಗಳಲ್ಲಿಯೇ ಅವರು ದಿವಂಗತರಾದರು.

ಗಡೇಕ್ಲಲು ಶಿವಲಿಂಗಪ್ಪನವರು ನಮ್ಮೂರಿಗೆ ಬೇಕಾದವರು; ನನಗೆ ಆಪ್ತರಾದವರು. ವಿಶೇಷವಾಗಿ ಇಲ್ಲಿಯ ಜೋಳದರಾಶಿ ದೊಡ್ಡನಗೌಡರು ಸಾಹಿತ್ಯ ಚಟುವಟಿಕಗೆಳಲ್ಲಿ ಕಾವ್ಯ ಪ್ರವಚನಗಳಲ್ಲಿ ಭಾಗವಹಿಸಿ ಆನಂದಗೊಳ್ಳುತ್ತಿದ್ದವರು. ಅವರೊಂದಿಗೆ ಪರಿಚಯರಾದವರೆಂದರೆ ವಿರೂಪಾಕ್ಷಗೌಡರು. ಆ ಗ್ರಾಮದ ಕರಣಿಕರಾಗಿ ಸರಕಾರದಲ್ಲಿ ಗ್ರಾಮದಲ್ಲಿ, ದಕ್ಷತೆಯ ಗೌರವನೀಯವಾದ ವರ್ತನೆಯಿಂದ, ಸುತ್ತುಮುತ್ತಲ ಹಳ್ಳಿಯವರಿಗೆ ಬೇಕಾಗಿ, ಹಿರಿಯ ಕುಟುಂಬದ ವ್ಯಕ್ತಿಗಳಾಗಿದ್ದವರು, ಅವರು ದೊಡ್ಡನಗೌಡರ ಹಿರಿಯ ಸ್ನೇಹಿತರಾಗಿದ್ದು, ಅದರ ಗೌರವಗಳಿಂದ ನೋಡುತ್ತಿದ್ದರು.

ಅವರ ಕಟ್ಟುನಿಟ್ಟಿನ ಸ್ವಾಭಾವಕ್ಕೆ, ಅಚರಣೆಗೆ ಎಲ್ಲರೂ ಹೆದರುತ್ತಿದ್ದರು. ಒಂದು ಸಲ ಮನೆಗೆ ಬಂದ ಅಯ್ಯನವರಿಗೆ ನವಣಿ ಅನ್ನ ಉಣ್ಣಲಿಟ್ಟು, ತಮಗೆ ಅಕ್ಕಿ ಅನ್ನವಿಡಲು ಕಂಡು "ಆ ಸ್ವಾಮಿಯವರಿಗಿಡದ ನವಣಿ ಅನ್ನ ನನಗೇಕಿಡುತ್ತೀಯಮ್ಮಾ! ಅವರಿಗಿಟ್ಟದ್ದೇ ನನಗೂ ಇಡು" ಎಂದು ಅಂದಿನಿಂದ ಅವರಿಗೆ ಏನೆನಿಸಿತೋ ಏನೋ ಒಳಗೆ ಬಂದು ಉಣ್ಣುವುದನ್ನೇ ಬಿಟ್ಟು, ಹೊರಗೆ ಪಡಸಾಲೆಯಲ್ಲೇ ಕೂತು ಇತರ ಸ್ನೇಹಿತರು ಹೇಳಿದರೂ , ಕೊನೆಯವರೆಗೂ, ಒಳಗೆ ಬಂದು ಕೂತು ಉಣ್ಣಲಿಲ್ಲ. ಮನೆಗೆ ಯಾರು ಬಂದರೂ ಯಥಾರೀತಿ ಸತ್ಕರಿಸಿ ಅವರನ್ನು ಒಳಗೆ ಕೂಡಿಸಿ, ತಾವು ಹೊರಗೆ ಕೂತೇ ಉಣ್ಣುತ್ತಿದ್ದರು.

ಹೊಸಕಾಲ್ಮರಿ ಮಾಡಿಕೊಂಡು ಬರಲು, ಮನೆಯ ಒಕ್ಕಲು ಮಾದಿಗರವನಿಗೆ ಇಂಥದಿನ ತರಬೇಕೆಂದು ಹೇಳಿದ್ದರು. ಅನಾನುಕೂಲವಾಗಿ, ಆ ದಿನ ಅವನು ಚಪ್ಪಲಿತರದೆ, ಮರುದಿನ ತಂದಿಟ್ಟ. "ಬೇಡಹೋಗು ಇನ್ನಾರಿಗಾದರೂ ಕೊಡು" ಎಂದು ವಿರುಪಾಕ್ಷಗೌಡರು ಅವನನ್ನು ನಡೆ ಎಂದಾಗ, "ಗೌಡರೇ ಇವು ನಿಮಗಾಗಿ ಮಾಡಿದ್ದು. ನಿನ್ನೆ ತರಬೇಕಾಗಿತ್ತು ತರಲಿಲ್ಲ ತಪ್ಪಾಯಿತು. ಇನ್ನಾರಿಗೆ ಇವನ್ನು ಕೊಡಲಿಕ್ಕೆ ಎಂಗೆ ಬಂದೀತು" ಎಂದು ಅವನೆಷ್ಟು ಅಂಗಲಾಚಿ ಬೇಡಿಕೊಂಡರೂ, ಗೌಡರು ಕೇಳಲಿಲ್ಲ. ಆ ಮಾದಿಗಪ್ಪ ಹೆದರಿ ಸುಮ್ಮನೆ ಆ ಚಪ್ಪಲಿ ಇಲ್ಲೇ ಬಿಟ್ಟು ಹೊರಟ. ಅದೇ ಹೊತ್ತಿಗೆ ಅವರ ಮನೆ ಮುಂದೆ ಹಾದು ಹೋಗುತ್ತಿದ್ದ, ಒಬ್ಬ ಜಂಗಮಯ್ಯನನ್ನು, ಕರೆದು "ಸ್ವಾಮಿ ಈ ಕಾಲ್ಮರಿ ಮೆಟ್ಟಿಕೊಂಡು ಹೋಗಿ" ಎಂದಾಗ "ಯಾಕೆ ಗೌಡರೇ ಅವು ಹೊಸವು ನಮ್ಮವೇನೋ" ಎಂದು ಸಂಕೋಚಪಟ್ಟ ಆ ಸ್ವಾಮಿಗೆ, "ಸುಮ್ಮನೆ

ಮೆಟ್ಟಿಕೊಂಡು ಹೋಗಿ" ಎಂದಾಗ ಹೆಚ್ಚಿನ ಮಾತು ಯಾಕೆಂದ, ಆ ಅಯ್ಯನವರು ಮೆಟ್ಟಿಕೊಂಡು ಹೋದರು. ಅಯಿತು ಮತ್ತೆಂದೂ, ವಿರೂಪಾಕ್ಷ ಗೌಡರು ಸಾಯುವ ಪರಿಯಂತರ ಕಾಲ್ಮರಿ ಮೆಡಲಿಲ್ಲ.

ಗೌಡರಿಗೆ ಮಕ್ಕಳಿರಲ್ಲಿ; ಕುಟುಂಬ ತೀರಿ ಬಹಳ ಕಾಲವಾಗಿತ್ತು. ತಮ್ಮನ ಕುಟುಂಬದಲ್ಲಿಯೆ ಹೊಂದಿಕೊಂಡಿದ್ದರು. ಆ ಊರಿನ ಭೀಮಕವಿಯ ಗದ್ದುಗೆ ಇಲ್ಲಿದ್ದು, ಬೆಸ್ತರೇ ಪೂಜೆಮಾಡುವ ಸಂಪ್ರದಾಯವಿದೆ. ಪ್ರತಿವರುಷ ಆಷಾಡದಲ್ಲಿ ದೊಡ್ಡ ಜಾತ್ರೆಯು ನಡೆಯುತ್ತೆ. ಬಸವ ಪುರಾಣವನ್ನು ಬರೆದ ಭೀಮಕವಿಯ ಗದ್ದುಗೆ ಎಂದು, ಕೆಲವರು ಊಹೆ ಮಾಡಿದ್ದಾರೆ. ಆ ಊಹೆಗೆ ತಕ್ಕ ಆಧಾರಗಳು ಅಲ್ಲಿ ದೊರೆಯುವುದಿಲ್ಲ. ಬಸವಪುರಣ ಬರೆದ ಭೀಮಕವಿ ಸಿದ್ಧವಟದವರು. ಇಲ್ಲಿರುವ ಭೀಮಕವಿ ವೇಮುಲವಡದವರೆಂದೇ ಪ್ರತೀತಿ. ಆಂಧ್ರ ಕವಿ ಚರಿತ್ರೆಯಲ್ಲಿ  ವೇಮುಲವಾಡ ಭಿಮಕವಿಯ ಬಗ್ಗೆ ಹೇಳಿದ ಕಥೆಗಳು, ಆತನ ವರ್ತನೆಗಳೂ, ಇಂದಿಗೂ ಇಲ್ಲಿ ಅನೇಕರು ಆಡಿಕೊಳ್ಳುವುದುಂಟು. ವಿರೂಪಾಕ್ಷಗೌಡರು ಈ ಭೀಮಲಿಂಗನಲ್ಲಿ ಪರಮಭಕ್ತರಾಗಿ, ಆ ದೇವಸ್ಥಾನದ ಎಲ್ಲಾ ಕಾರ್ಯಗಳಲ್ಲಿಯೂ, ಯಾಜಮಾನ್ಯ ವಹಿಸಿ, ವಿಶ್ವಾಸದಿಂದ ವರ್ತಿಸುತ್ತಿದ್ದರು. ಗೌಡರು ಮಾತನಾಡುತ್ತಿದ್ದುದೇ ಬಹು ಕಡಿಮೆ. ಅವರ ಕಾರ್ಯವ್ಯಾಪ್ತಿಯು ಮಾತ್ರ, ಶತ್ರುಗಳೂ ಬೆರಳೂ ಕಚ್ಚುವಂತಹದು. ಅಲ್ಲಿ ಶಿವಾನುಭವ ಸಂಘವನ್ನು ಸ್ಥಾಪನೆಮಾಡಿ, ಪ್ರತಿವಾರ ಪ್ರವಚನ ನಡೆಸುತ್ತಿರುವಾಗ, ಅನೇಕಸಲ ಅವರಿರುವಾಗ ದೊಡ್ಡನಗೌಡರು ಅಲ್ಲಿಗೆ ಹೋಗಿಬಂದುದುಂಟು. ಅವರು ಆಗಲೇ ದಿವಂಗತರಾಗಿ ಆರೇಳು ವರ್ಷಗಳು ಗತಿಸಿದವು. ಅವರ ಔಚಿತ್ಯ, ಆದರಣೆಗಳು ನನ್ನನ್ನು ಸೆರೆಹಿಡಿದ್ದವು. ಅಂತಹ ವ್ಯಕ್ತಿಯನ್ನು, ನನ್ನ ಜೀವನದಲ್ಲಿ ನೋಡುವುದು ದುರ್ಲಭ. ಅವರಲ್ಲಿ ಒಂದು ಶ್ರೇಷ್ಠ ಗುಣವಿತ್ತು. ಒಮ್ಮೆ ಯಾರನ್ನಾದರೂ ನಂಬಿದರೆಂದರೆ, ಕೊನೆಯವರೆವಿಗೂ ಆ ನಂಬಿಕೆಗೆ ಚ್ಯುತಿಬಾರದೆ, ಅವರ ಬೆನ್ನುಗಟ್ಟಿ ನಿಲ್ಲುವ ಮಹಾಕಾರ್ಯಶೀಲ ತತ್ವ ಅವರದು.

ಒಂದೆರಡು ವರ್ಷಗಳಿಂದ ದೇಸಾಯಿ ಶಿವಲಿಂಗಪ್ಪನವರು, ಅಸ್ವಸ್ಥರಾಗಿರುತ್ತಿದ್ದರೂ, ನಮ್ಮೂರಿಗೆ ಬರುವುದೂ ಹೋಗುವುದೂ, ನಡೆದೇಯಿತ್ತು. ಒಂದು ಸಲ ಅವರಿಂದ ಕರೆ ಬಂದಾಗ, ಅವರಗೆ ಬೇಕಾದವರಾದ, ದೊಡ್ಡನಗೌಡರು ಬಿ.ರುದ್ರಗೌಡ, ಚಿಲಕರಾಯಿ

ದೊಡ್ಡನಗೌಡ, ಇನ್ನು ಕೆಲವರು ಹೋಗಿ ನೋಡಿದಾಗ ತೀರಾ ವಿಪನ್ನಾವಸ್ಥೆಯಲ್ಲಿದ್ದರು. ಗಂಡಲು ಹಿಡಿದು ಮಾತನಾಡಲು ಬರುತ್ತಿರಲಿಲ್ಲ. ನಮ್ಮನ್ನು ನೋಡಿ ಕೈಯೆತ್ತಿ ನಮಸ್ಕಾರ ಮಾಡಿದ. ಕಣ್ಣಲ್ಲಿ ನೀರು ತಂದುಕೊಂಡ. ಮಾತು ನಿಂತಿದ್ದರೂ, ಸಾವಡಸಿ ಬಂದಿದ್ದರೂ, ತುಂಬಾ ಎಚ್ಚರಿಕೆಯಿಂದ ಇನ್ನು ನನ್ನದಾಯಿತು, ಕಾಲ ಮುಗಿಯಿತು ಎಂಬ ಭಾಗವನ್ನು ಮುಖದಲ್ಲಿ ಮೂಡಿಸಿದ. ಎದ್ದು ಕೂಡಿಸೆಂದು ಸನ್ನೆಮಾಡಿದಾಗ ಆನಿಕೆಯಿತ್ತು, ಎಬ್ಬಿಸಿ ಕೂಡಿಸಿದರು, ನಮ್ಮೆಲ್ಲರನ್ನು ಕಣ್ಣುತುಂಬ ನೋಡಿದ. ನಿರುಪಾಯರಾದ ನಾವು ಏನು ಹೇಳಲು ಮಾತುಬಾರದೆ, ಅಲ್ಲಿಂದ ಹೊರಗೆದ್ದು ಬಂದು ಆತನಿಗಾದ ಮರಣವೇದನಗೆಗೆ ಚಿಂತಿತರಾಗಿ, ಊರಿಗೆ ಬಂದೆವು. ನಾವು ಈ ಕಡೆ ಬಂದ ಕೂಡಲೆ ಶಿವಲಿಂಗಪ್ಪನವರು ಆ ಕಡೆ ಪರಲೋಕಕ್ಕೆ ಪ್ರಯಾಣ ಬೆಳೆಸಿದರೆಂಬ ಸುದ್ದಿ ನಮಗೆ ತಿಳಿದು ವ್ಯಸನವಾಯಿತು.

ಹೀಗೆ ಒಬ್ಬೊಬ್ಬರನ್ನು ಅಗಲಿದ ದುಃಖದಲ್ಲಿರುವಾಗ ಅನಿವಾರ್ಯವಾದ, ಸಂಗೀತನಾಟಕ ಅಕಾಡೆಮಿಯ ಮೀಟಿಂಗಿಗೆ, ಬೆಂಗಳೂರಿಗೆ ಹೋಗಬೇಕಾಗಿ ಬಂತು. ರವೀಂದ್ರ ಕಲಾಕ್ಷೇತ್ರದಲ್ಲಿ ಉದಯ ಮೀಟಿಂಗು ನಡೆಯಿತು. ಹೊಸ ಚೇರ್ಮನ್, ಕಾರ್ಯದರ್ಶಿ ಅಧಿಕಾರ ವರ್ಗದ ತೊಂದರೆಯಿಂದ, ಮೀಟಿಂಗ್ ಮತ್ತೆ ಮಧ್ಯಾನ್ನ 3 ಘಂಟೆಗೆ ಮುಂದುವರಿಯಿತು. ಮತ್ತು 3 ಘಂಟೆಯಿಂದ ರಾತ್ರಿ 8 ಘಂಟೆಯಾದರೂ ಅದರ ಸಮಸ್ಯೆಗಳು ಬೆಳೆದವಾಗಲಿ, ಬಗೆಹರಿಯಲಿಲ್ಲ. ಬೇಸತ್ತು ನಾವೆದ್ದು ಬರುವಾಗ, ಒಂದು ಜೊಳ್ಳು ಸಮಾಧಾನಕ್ಕೆ ಬಂದು ಮುಗಿಸಲಾಯಿತು.

**ಜೀವನದ ಬೇವು – ಬೆಲ್ಲ**

ವಿಷವಾದರೂ, ಅಮೃತವಾದರೂ ಮೌನದಿಂದ ಕುಡಿದುಬಿಡುವ ಯಜಮಾನ್ಯವನ್ನು ವಹಿಸಿದೆ. ದೊಡ್ಡನಗೌಡರ ತಂಗಿಯ ಹಿರಿಯ ಮಗ ಹುಟ್ಟಿದಂದಿನಿಂದ ಇಲ್ಲೇ ಬೆಳೆದು ವಿದ್ಯಾಭ್ಯಾಸದಲ್ಲಿ ತೊಡಗಿದ್ದ. ಚಿಕ್ಕಪ್ಪನ ಕುಟುಂಬವೂ ನನ್ನ ಕುಟುಂಬವೂ ಒಂದೇಯಾಗಿ ಕೂಡಿಕೊಂಡು ಬೆಳೆದು ಬಂದಿತ್ತು. ಈ ಕುಟುಂಬದ ವ್ಯವಸ್ಥೆ ತಂದೆಯವರೇನೂ ಮಾಡದೆ ಗತಿಸಿದ್ದರು. ಚಿಕ್ಕಪ್ಪನು ಒಂದೇ ಸವನೆ ದುಡಿಮೆಯ ಹಾದಿಯಲ್ಲೇ ಆಯುಷ್ಯ ಕಳೆದವರು. ಮಕ್ಕಳು ಮರಿಗಳು ಭಾಗ್ಯವೂ ಹೆಚ್ಚಿತು. ಈ ಹೆಚ್ಚಿನ ಭಾಗ್ಯವು ಈ ಕುಟುಂಬದ

ಜಮೀನುದಾರಿಕೆಯ ಕೆಲಸಗಳಲ್ಲಿ ಉಪಯೋಗವಾಗುತ್ತಿತ್ತು. ಬಹುಕಾಲದಿಂದ ನಡೆದು ಬಂದ ಜಾಡಿನಲ್ಲಿಯೇ ದೊಡ್ಡನಗೌಡರ ಯಜಮಾನಿಕೆಯ ಹೆಜ್ಜೆಗಳಿಟ್ಟು ಮುಂದುವರಿದೆ.

**ಕಲಿಸಿದ್ದು ಕಲಿತದ್ದು**

ದೊಡ್ಡನಗೌಡರ ಸಾರ್ವಜನಿಕ ಸೇವೆಯಲ್ಲಿ ಕಲಿಸಿದ್ದುದೆಷ್ಟೊ ನಾನರಿಯೆ. ಕಲಿತದ್ದೇಹೆಚ್ಚು. ಅದಕ್ಕೆ ನಾಡಿನ ಹಿರಿಯರಿಗೂ ಕಿರಿಯರಿಗೂ ಋಣಿಯಾಗಿರುವೆ. ದೊಡ್ಡನಗೌಡ ನೆನಪಿನಲ್ಲಿ ದೊಡ್ಡನಗೌಡ ಕಲಿಸಿದ್ದು ಕಲಿತವರೆಂದರೆ, ಡಾ॥ ನಂಜಪ್ಪನವರೊಬ್ಬರೇ. ಈ ಸನ್ನಿವೇಸ ಒದಗಿದ್ದು 1967 ಕೊಟ್ಟೂರಲ್ಲಿ. (ದಸರೆಯ) ನಾಡಹಬ್ಬಕ್ಕೆ ಆಹ್ವಾನ ಪತ್ರದೊಂದಿಗೆ, ನನ್ನ ಹೆಸರನ್ನು ಕಾರ್ಯಕ್ರಮದಲ್ಲಿ ಪ್ರಕಟಿಸಿದ, ಪತ್ರಿಕೆಯೊಂದಿಗೆ ಡಾ. ನಂಜಪ್ಪನವರು ಕಳಿಸಿದರು. ಅದನ್ನು ನೋಡಿ ಸಿಟ್ಟುಬಂತು. ಇದೆಂತಾ ಆಹ್ವಾನಾ? ನನ್ನ ಸಮ್ಮತಿಯಿಲ್ಲದೆ, ಕಾರ್ಯಕ್ರಮದಲ್ಲಿ ಹೆಸರು ಪ್ರಕಟಿಸಿ, ತರುವಾಯ ಅದರೊಂದಿಗೆ ಆಹ್ವಾನಪತ್ರ ಕಳಿಸುವದು ಯಾವ ಸಂಪ್ರದಾಯ? ಇದೆಂಥಾ ಉದ್ಧಟತನ? ಇದೆಂಥಾ ಅಸಂಸ್ಕಾರ ವರ್ತನೆ? ಕರೆಯಲಿಕ್ಕೆ ಬಾರದವರು ಕಾರ್ಯಕ್ರಮ ಹೇಗೆ ಮಾಡುತ್ತಾರೆ? ಇವರಿಗೆ ಬುದ್ಧಿಕಲಿಸಬೇಕು. ಸಾಹಿತಿ ಕಲಾವಿದರೆಂದರೆ ಸಾರ್ವಜನಿಕ ಹೆಣ್ಣೆಂದು ತಿಳಿಯುವಂತಾಯಿತೆ, ಆ ಹೆಣ್ಣನ್ನಾದರೂ ಪಡೆಯಲೇಬೇಕೆಂಬುವವರು, ಮೊದಲು ಸಮ್ಮತಿಯನ್ನು ಪಡೆಯಬೇಕು. ಈ ಸಾಹಿತಿ, ಕಲಾವಿದ, ಅದಕ್ಕಿಂತಲೂ ಕೀಳೆ!.

ಈ ಹಿಂದೆ ಹಲವಾರು ಜನರು ನನ್ನನ್ನು ಈ ರೀತಿಯಿಂದಲೇ ಉಪಯೋಗಿಸಿಕೊಂಡಿದ್ದರು. ತಾಳ್ಮೆಯಿಂದ ಸಹಿಸಿ ನನ್ನ ಕಲಾ ಜಿಜ್ಞಾಸೆಯಿಂದ ಸಹಕರಿಸಿ ಸೇವೆ ಸಲ್ಲಿಸಿದ್ದೆ. ಆಗಾಗ ಆತ್ಮಾಭಿಮಾನವು ಮುಂದೆ ನಿಂತು, ನನ್ನ ಸಡಿಲತನದ ಕಕ್ಕುಲತೆಯನ್ನು ಅಣಕಿಸುತ್ತಿತ್ತು. ನಾನೇನೂ ಧನದ ದಾಸಯ್ಯನಾಗಿ ಹೋಗುತ್ತಿರಲಿಲ್ಲ. ದೊಡ್ಡನಗೌಡರ ಕಾರ್ಯಕ್ರಮಕ್ಕೆ ವಾದ್ಯಗಾರರ ಪರಿವಾರವನ್ನು ಕಟ್ಟಿಕೊಂಡು, ಪ್ರವಾಸದ ಪ್ರಯಾಸ, ವಸತಿ ಅನಾನುಕೂಲ, ಊಟೋಪಚಾರಗಳ ಕೊರತೆ..... ಒಂದೊಂದು ಕಡೆ ಒಂದೂವರೆ ದಿನಕ್ಕೆ ಒಂದೊಪ್ಪತ್ತು ಊಟ ಸಿಗುವುದು ದುರ್ಲಭವಾದರೂ, ಕೊನೆಗೆ ಗಾಡಿ ಖರ್ಚುಗಳು ಕೈಸುಟ್ಟರೂ, ಗಂಟಲು–ಬುದ್ಧಿ, ಮನಸ್ಸುಗಳನ್ನು ಹತೋಟಿಯಲ್ಲಿಟ್ಟುಕೊಂಡು.

ಕಾರ್ಯಕ್ರಮದಿಂದ ಜನತೆಗೆ ಆನಂದದಲ್ಲಿ ಯಾವ ಕೊರತೆಯಾಗಬಾರದೆಂದು, ಬಹುಮಟ್ಟಿಗೆ ಯಶಸ್ವಿಯಾಗಿ, ನಾಡಿಗೆ ನನ್ನ ಕಲಾಸೇವೆ ಸಲ್ಲಿಸುವಲ್ಲಿ, ನಾನೆಂದು ಉದಾಸಿನ ಮಾಡಿರಲಿಲ್ಲ.

ಸಂಭಾವನೆಗಳು, ಸನ್ಮಾನಗಳು ನನಗೆ ಬೇಕಾಗಿರಲಿಲ್ಲ. ನನ್ನ ಕಲೆಯನ್ನು ಸಹೃದಯತೆಯಿಂದ ಆಲಿಸಿದರೆ ಸಾಕಾಗಿತ್ತು. ಏಕೆಂದರೆ ನಾನೊಬ್ಬ ಹಳ್ಳಿಯ ಒಕ್ಕಲ ಕಾಯಕದವ. ಯಾಚಿಸುವುದಂತೂ ಅವರ ಕುಲಕ್ಕೆ ಅಪಮಾನ. ನಮ್ಮ ಗೌಡರ ಮನೆತನಗಳಲ್ಲಿ, ಅದರಲ್ಲಿ ಒಕ್ಕಲು ಕಾಯಕದಲ್ಲಿ, ಇಂತಹ ಕಲಾವಿದರು, ಸಾಹಿತಿಗಳು, ಅಪರೂಪ. ಎಲ್ಲೋ ಅಲ್ಲೊಬ್ಬರು ಇಲ್ಲೊಬ್ಬರು ಕೆಲವೇ ಜನರಿದ್ದು, ಕಲಾಸೇವೆಯ ಹುಚ್ಚಿನಿಂದ ನಾಡುಸುತ್ತುವಾಗ, ಅಲ್ಲಲ್ಲಿಯ ಉತ್ತಮಕುಲದ ಬುದ್ಧಿವಂತರ ಉಪಹಾಸಕ್ಕೆ, ಮೂಗು ಮುರಿತಕ್ಕೆ, ಗುರಿಯಾಗಬೇಕಾಗಿತ್ತು. ಅದರಲ್ಲಿ ಲಿಂಗವಂತ ಹಳ್ಳಿಯ ಗೌಡರೆಂದರೆ, ತೀರಾ ತಾತ್ಸಾರದ ಸ್ಥಾನದಲ್ಲಿಟ್ಟು ಉಳ್ಳೇಗಡ್ಡೆ, ಎಂದು ನಕ್ಕು ಬಿಡುತ್ತಿದ್ದರು. ಈ ರೀತಿ ಇಂದು ವ್ಯಕ್ತವಾಗುವಷ್ಟು ಚೈತನ್ಯ ಕಳೆದುಕೊಂಡಿದ್ದರೂ, ಅಂದು (ಜೋಳದರಾಶಿ ದೊಡ್ಡನಗೌಡ ಕಾಲದಲ್ಲಿ) ಸಾಕಷ್ಟು ಉದ್ಧಟತನವಾಗಿ, ನಮ್ಮಂತವರು ಛೀಮಾಡಿಸಿ ಕೊಳ್ಳುವಪ್ಪಿತ್ತು. ಈ ಛೀಮಾರಿಗೆ ದೊಡ್ಡನಗೌಡರು ಹೊರತಾಗಿರಲಿಲ್ಲ.

ಇಷ್ಟೇಕೆ ಇಲ್ಲಿ ಬರೆಯುತ್ತಿರುವೆನೆಂದರೆ, ಸಾಮಾನ್ಯವಾಗಿ ನಮ್ಮದೇಶದ ಜನ, ಉತ್ತಮ ಕಲೆ, ಕಲೆಗಾರನನ್ನು ಅರಿತು, ಆದರಿಸುವಲ್ಲಿ ತಮ್ಮ ಅಸೂಯೇ ಅಸಮಾಧಾನ-ಜಾತೀಯತೆಯ ತಿರಸ್ಕಾರಗಳನ್ನು ಮುಂದೊಡ್ಡಿ, ನಿಜವಾದ ಕಲಾಸೇವೆಗೆ ಕಂಟರಾದುದಲ್ಲದೆ, ಕೊನೆಗೂ ಏನೂ ಕೊಡದಿದ್ದರೂ, ಒಂದು ಒಳ್ಳೆಯ ಮಾತು, ಕೊಂಚವೇ ಕೊಂಚ ಸಹಾನುಭೂತಿ, ಆದರಣೆ ತೋರುವುದಾದರೂ ಇಲ್ಲವಲ್ಲ ಎಂಬ ವೇದನೆ, ನನಗಾಗುವಂತೆ ನಮ್ಮ ನಾಡಿನ ಯಾವ ಕಲಾವಿದನಿಗಾದರೂ ಆಗುವುದು ಸಹಜವೇ ಆಗಿದೆ ಎಂದರು.

ತಮ್ಮ ತಪ್ಪನ್ನು ತಿದ್ದಿಕೊಂಡು, ದೊಡ್ಡನಗೌಡರ ಪತ್ರಾಭಿಪ್ರಾಯಕ್ಕೆ ಸಭಿಕರ ಟೀಕೆ ಟಿಪ್ಪಣಿಗಳನ್ನು ಸೂಕ್ತವಾಗಿ ವಿವರಿಸಿದ ಪತ್ರವನ್ನೋದಿ, ನಂಜಪ್ಪನವರ ದಾಸೋಹಂಭಾವಕ್ಕೆ ಮೆಚ್ಚಿಕೆಯಾಗಿ, ನನ್ನ ಕಟೂಕ್ತಿಯು ಸೋಹಂಭಾವಕ್ಕೆ ಕಳವಳವಾಯಿತು. ಕಲಾವಿದನ ಇಂದಿನ

ಸ್ಥಿತಿಗಾಗಿ ಮರುಕಗೊಂಡು, ಅನುತಾಪದಿಂದ ಅವನ ಔನ್ನತ್ಯವನ್ನು ಎತ್ತಿ ಹಿಡಿಯಲು, ನಿಷ್ಠುರವಾಗಿ ಕಹಿಯ ನುಡಿಜಾಲವನ್ನು, ನಿರ್ವಾಹವಿಲ್ಲದೆ ಬಳಸಬೇಕಾಯಿತು.

ಸಾಮಾನ್ಯವಾಗಿ ಜನರು ಕಲಾವಿದನಿಂದ ಬಯಸುವುದು ಆನಂದ, ಅದರ ಹಿನ್ನೆಲೆಯಲ್ಲಿಯ ದುಃಖವನ್ನು, ಜೀವನದ ಕೊರತೆಯನ್ನು, ಅವನು ಕಟ್ಟಿಕೊಂಡ ಸಂಸಾರದ ಬಾಳನ್ನು, ಲಕ್ಷಿಸುವ ಇಚ್ಛೆ, ಅದಕ್ಕಾಗಿ ಮರುಗುವ ಮನಸ್ಸು, ಸಾಮಾಜಿಕರಲ್ಲಿರುವುದು ಅಪರೂಪ. ಅವನು ನಮ್ಮಂತೆ ಮನುಷ್ಯತ್ವಕ್ಕೆ ದೂರಾದವನಲ್ಲವೆಂದು ಭಾವಿಸುವ, ಸಹಕಾರ ಸಹೃದಯತೆಯನ್ನು ತೋರುವ ಜನರು ನಮ್ಮ ದೇಶದಲ್ಲಿ ತೀರ ಸ್ವಲ್ಪ.

ಸಹಾಯವಿರಲಿ ಇಲ್ಲದಿರಲಿ ಹುಟ್ಟಿನೊಂದಿಗೆ ವಿಕಾಸವಾಗಿ, ಅದೊಂದು ಹುಚ್ಚಾಗಿ, ಜೀವನದ ಸಿಹಿ–ಕಹಿಗಳ ಅರಿವಿಲ್ಲದೆ, ಎತ್ತಲೋ ಹೇಳಲಿಕ್ಕೆ ಬಾರದ ಆನಂದಾನುಭೂತಿಯಾಗಿ, ಕಲಾವಿದನನ್ನು ಎಳೆದುಕೊಂಡು ಹೋಗುವ ಕಲೆಯು ಕುಡಾ ಬಯಸುವುದು ಆನಂದವನ್ನೇ. ಕಲಾವಿದನಾದವನು ತ್ಯಾಗಭೂಮಿಯಲ್ಲಿ ಸ್ಥಿರವಾಗಿ ನಿಂತು, ತನ್ನ ಸರ್ವಸ್ವವನ್ನು ಧಾರೆಯೆರೆದು, ಪ್ರತಿಫಲಾಪೇಕ್ಷೆಯಿಲ್ಲದೆ ತ್ಯಾಗಜೀವಿಯಾಗಿ, ಅವನ ಬಾಳ ಕೊನೆಯವರೆಗೂ ಸವೆಯಬೇಕು. ತನ್ನ ಅಂತರಂಗದ ಸಾಂಸಾರಿಕ ದುಃಖಗಳನ್ನು ಅಡಗಿಸಿಟ್ಟು, ದೇಶಕ್ಕೆ, ಜನತೆಗೆ, ದೊಡ್ಡನಗೌಡರ ಕಲೆಯಿಂದ ಸೌಖ್ಯವನ್ನೇ ನೀಡುವ ಉದಾರಿಯಾಗಿರಬೇಕು. ಹೀಗಿರುವ ಉತ್ತಮ ದೈವೀ ಶಕ್ತಿಯೇ ಕಲಾ ವೈಭವದ ಕಲೆಗಾರನಿಗೆ, ಜನತೆಯು ನೀಡುವ ಸನ್ಮಾನವಾದರೂ ಅದೆಷ್ಟು? ಸಹಾಯವಾದರೂ ಅದೆಷ್ಟು? ಇದುವರೆಗೂ ನಮ್ಮ ದೇಶದ ಚರಿತ್ರೆ, ದಿಕ್ಕು – ದೆಶೆಯಿಲ್ಲದೆ ಕಾಲಗರ್ಭದಲ್ಲಡಗಿದ, ಅನೇಕ ಕಲಾವಿದರ ಬಗ್ಗೆ ಈ ದೇಶ ಯಾವ ಗರುತುಗಳನ್ನು ನಿರ್ಮಿಸಿದೆ? ಏನೋ ತಾತ್ಕಾಲಿಕ ಉತ್ಸಾಹಿತ ಸನ್ನಿವೇಶಗಳು ಉಂಟಾದಾಗ, ಕೊಂಚ ಸ್ಮರಣೆ, ಸ್ಮಾರಕದ ಮಾತು, ಹೊಗಳಿಕೆಯ ಮಾಲೆ ಇಷ್ಟರಲ್ಲಿಯೇ ಮುಂದೆ ಸಾಗದೆ, ಕೆಲವು ದಿನಗಳಲ್ಲಿಯೇ ಆ ಸ್ಮರಣೆ–ಸ್ಮಾರಕಗಳು ನಿಂತು ಹೋಗುತ್ತವೆ.

ಇವುಗಳಿಗಾಗಿ ಚಿಂತಿಸುತ್ತ ಬದುಕಿದ ಕಲಾವಿದ, ಬೇಸತ್ತು ಒಮ್ಮೆ ಬಿರುನುಡಿ ನುಡಿದಾಗ, ಅವನ ಮನಸ್ಸತ್ವವನ್ನು ಅರಿಯದ, ಜನಾಂಗದಿಂದ ತೆಗಳಿಕೆಯ ಪ್ರತಿಭಟನಗೆಳು

ಉಂಟಾಗುತ್ತವೆ. ನಂಜಪ್ಪನವರ ಟೀಕೆ-ಟಿಪ್ಪಣಿಗಳಲ್ಲಿ ಮೂರು-ನಾಲ್ಕನೆಯ ಟೀಕೆಗಳು, ಹೃದಯವುಳ್ಳ ಕಲಾವಿದನಿಗೆ, ಶೂಲವಾಗಿ ಚುಚ್ಚುವುದಂತು ನಿಜ. ಹೆಚ್ಚಾಗಿ ಇಲ್ಲಿ ನಾನು ಆ-ಪತ್ರದ ಬಗ್ಗೆ ಹೇಳುವುದೆಂದರೆ, ಸರಳ-ಸೌಹಾರ್ದತೆಯ ಸಾಹಿತ್ಯ ಸುಧೆಯುಂಡು, ತಮ್ಮ ವೈದ್ಯಕೀಯತೆಯೊಂದಿಗೆ ಕಲೆ, ಸಾಹಿತ್ಯ, ಸಂಸ್ಕೃತಿಗಳನ್ನು ಬೆಳಸಿಕೊಂಡು ಬಂದ, ನಂಜಪ್ಪನವರ, ಹೃದಯ ವೈಶಾಲ್ಯತೆಯಲ್ಲಿ ದೊಡ್ಡನಗೌಡರ ಗೌಡತನದ ಒರಟುತನವನ್ನು, ಕಂಡುಕೊಂಡೆನೆಂಬುದು ಮಾತ್ರ ನಿಜ.

ಡಾಕ್ಟರರಿಗೆ ಬುದ್ಧಿಹೇಳಲು ಹೋಗಿ ನಾನು ಕಲಿತುಕೊಂಡೆ. ಅನುತಾಪಗೊಂಡು ಅವರಿಗೆ ವಿಸ್ತಾರವಾಗಿ ಪತ್ರ ಬರೆದು. ಅವರ ನಿಷ್ಕಪಟ-ನಿರ್ಮಲ ಸ್ನೇಹವನ್ನು ಉಳಿಸಿಕೊಂಡೆ. ಅವರೂ ಕೂಡ ನನ್ನ ಹಿರಿತನವನ್ನು, ಕಲೆಯನ್ನು, ಸಮಾಜ ಸೇವೆಯನ್ನು ಮನ್ನಿಸಿ. ತಮ್ಮ ಕಳಕಳಿಯನ್ನು, ಸೂಚಿಸಿದರು. ಹಲವಾರು ವರ್ಷಗಳ ಮೇಲಾದ ಅವಧಿಯ ಈ ಘಟನೆ ಅಚ್ಚಳಿಮದಂತೆ ಇಂದಿಗೂ ನೆನಪಿನಲ್ಲಿ ಉಳಿದಿವೆ ಗೌಡರಿಗೆ.

# ಅಧ್ಯಾಯ-5

**ಸಾಹಿತ್ಯಕ ಅಧ್ಯಾಯನ :**

ಇಂದಿನ ಸಾಹಿತ್ಯಿಕ ಅಧ್ಯಯನಗಳು ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿ ಮತ್ತು ಸ್ವರೂಪಗಳನ್ನು ಪಡೆದುಕೊಳ್ಳುತ್ತಿವೆ. ಈ ಪ್ರಕ್ರಿಯೆಯ ಹಿಂದೆ ಎರಡು ಬಗೆಯ ಹಂಬಲಗಳು ತೀವ್ರವಾಗಿ ಕೆಲಸಮಾಡುತ್ತಿವೆ. ಒಂದು: ಸಾಹಿತ್ಯವನ್ನು ಕುರಿತ ಪಾರಂಪರಿಕ ನಿರ್ವಚನೆಯ ನೆಲೆಗಳನ್ನು ಮೀರುವ, ವಿಸ್ತರಿಸುವ ಮತ್ತು ಮರುವ್ಯಾಖ್ಯಾನಿಸುವ ಆಸಕ್ತಿ. ಇನ್ನೊಂದು, ಎಲ್ಲವನ್ನೂ ವಿಶಾಲವಾದ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಚರ್ಚಿಸಿ ತಾತ್ವೀಕರಿಸುವ ಪ್ರಯತ್ನ. ಇವೆರಡೂ ಒಂದರಿಂದ ಒಂದು ಗೆರೆ ಕೊರೆದಂತೆ ಪ್ರತ್ಯೇಕವಾಗಿಲ್ಲ. ಬದಲಾಗಿ ಒಂದರೊಳಗೊಂದು ಅಡಗಿ ಒಂದನ್ನೊಂದು ಪ್ರಭಾವಿಸುತ್ತ, ಅಭಿವೃದ್ಧಿಗೊಳಿಸುತ್ತ ಸಾಗಿವೆ. 'ಸಾಹಿತ್ಯಕ ವಲಯ'ವು ಒಟ್ಟಾರೆ ಸಾಮಾಜಿಕ ಪ್ರಕ್ರಿಯೆಗೆ ಪ್ರತಿಕ್ರಿಯಿಸುತ್ತಿರುವ ಸಂಕೀರ್ಣ ಕ್ರಮಗಳು ಹಾಗೂ ಸಾಮಾಜಿಕ ಪ್ರಕ್ರಿಯೆಯು 'ಸಾಹಿತ್ಯಿಕ ವಲಯ'ದ ಮೇಲೆ ಉಂಟು ಮಾಡುತ್ತಿರುವ ಪರಿಣಾಮದ ಫಲ ಇದರಲ್ಲಿ ಅಡಗಿದೆ. ಹಾಗಾಗಿ ಅಧ್ಯಯನಗಳ ನೆಲೆಯಲ್ಲಿ ನಡೆಯುತ್ತಿರುವ ಪ್ರಕ್ರಿಯೆಗಳು ಸಾಮಾಜಿಕ ಪ್ರಕ್ರಿಯೆಯ ಭಾಗಗಳೇ ಆಗಿವೆ. ಫಲವಾಗಿ ಇಂದು ಸಾಹಿತ್ಯ ಅಧ್ಯಯನಗಳಲ್ಲಿ 'ಸಾಹಿತ್ಯ' ಎಂಬುದು ಒಂದು ಗಂಭೀರ ನೆಪವಾಗಿದ್ದು, ಚರ್ಚಿಸುವ ಮತ್ತು ತಾತ್ವೀಕರಿಸುವ ಕ್ರಮಗಳಲ್ಲಿ ಸಾಂಸ್ಕೃತಿಕ ಹಾಗು ಸೈದ್ಧಾಂತಿಕ ಪ್ರಶ್ನೆಗಳು ಮುಂಚೂಣಿಗೆ ಬರುತ್ತಿವೆ. ಒಂದು ಸಾಮಾನ್ಯ ಕರಪತ್ರದಿಮದ ಹಿಡಿದು 'ಶ್ರೇಷ್ಠ ಕಲಾಕೃತಿ'ಯವರಿಗೆ ಇದರ ವ್ಯಾಪ್ತಿ ಇದೆ. ಇದರಲ್ಲಿ ಯಾವುದು ಕನಿಷ್ಠ - ಯಾವುದು ಶ್ರೇಷ್ಠ ಎಂಬ ತಾರತಮ್ಯವಿಲ್ಲದ ಧೋರಣೆ ಕೆಲಸ ಮಾಡುತ್ತಿದೆ. ಅಂದರೆ ಪ್ರತಿಯೊಂದರ ಹಿಂದೆಯೂ ಕೆಲಸ ಮಾಡುತ್ತಿರುವ ಸಾಮಾಜಿಕ ಪ್ರಕ್ರಿಯೆಯನ್ನು ಅರಿಯುವ ಸಾಂಸ್ಕೃತಿಕ ಒತ್ತಡ ನಮ್ಮ ಮುಂದಿದೆ.

ಸಾಂಸ್ಕೃತಿಕ ಒತ್ತಡದ ಭಾಗವಾಗಿ ಆತ್ಮಕಥೆಗಳನ್ನು ಅಧ್ಯಯನ ಮಾಡಬೇಕಾಗಿದೆ. ಆತ್ಮ ಕಥೆಗಳನ್ನು ಪ್ರಧಾನವಾಗಿ ಸಾಹಿತಿಗಳು ಬರೆದಿದ್ದಾರೆ. ಉಳಿದಂತೆ ಹೋರಾಟಗಾರರು, ರಾಜಕಾರಿಣಿಗಳು, ಮಠಾಧೀಶರು, ಸಾಮಾನ್ಯ ಶಿಕ್ಷಕ, ಹತ್ತು ವರ್ಷ ಆಸ್ಪತ್ರೆಯಲ್ಲೇ ಕಳೆದ ಅಂಗವಿಕಲ, ಪೋಲೀಸ್ ಅಧಿಕಾರಿ, ಒಬ್ಬ ನಿವೃತ್ತ ಅಂಚೆಪೇದೆಯವರೆಗೂ ಬರೆದಿದ್ದಾರೆ.

ಇವರೆಲ್ಲರೂ ಸಮಾಜದ ವಿಭಿನ್ನ ವರ್ಗದವರು ಮತ್ತು ವಿಭಿನ್ನ ಮನೋಧರ್ಮದವರು. ಈ ಹಿಂದಿನ ದಶಕಗಳಿಗೆ ಹೋಲಿಸಿದರೆ ನಿರ್ದಿಷ್ಟವಾಗಿ ಈ 90ರ ದಶಕದಲ್ಲಿ ಆತ್ಮ ಕಥೆಗಳು ಹೆಚ್ಚು ಬಂದಿವೆ. ಈ ಅಂಶವೂ ಆತ್ಮ ಕಥೆಗಳ ಬಗ್ಗೆ ಕುತೂಹಲ ಮತು ಆಸಕ್ತಿಯನ್ನು ಹುಟ್ಟಿಸುತ್ತದೆ. ಈ ಎಲ್ಲ ಬರವಣಿಗೆಗಳಲ್ಲಿ ಎದ್ದು ಕಾಣುವ ಒಂದು ಸಾಮಾನ್ಯ ಅಂಶವೆಂದರೆ, ಬರವಣಿಗೆಯಲ್ಲಿ ದಾಖಲಾಗಬೇಕೆಂಬ ಒಂದು ಬಗೆಯ ವಿಚಿತ್ರಗಳು. ಆದರೆ ಇದು ಇಲ್ಲಿಗೇ ನಿಲ್ಲದೆ ನಿರೂಪಣೆಯ ಸೈದ್ಧಾಂತಿಕ ಕ್ರಮದಿಂದಾಗಿ ಅವು ಸಾಮಾಜಿಕ ಚರಿತ್ರೆಯ ಭಾಗಗಳೂ ಹೌದು. ತನ್ನ ಜೀವನ ವಿವರಗಳು ತನ್ನ ಬರವಣಿಗೆಯ ಮೂಲಕವೇ ದಾಖಲಾಗಬೇಕು ಎಂಬ ಹಂಬಲ ಕೇವಲ ವೈಯಕ್ತಿಕ ತುಡಿತದಂತೆ ಕಂಡರೂ ಅದರಾಚೆಗಿನ ಜಗತ್ತು ಇದನ್ನು ಪ್ರೇರೇಪಿಸುತ್ತಿದೆ.

ಬರವಣಿಗೆಯ ಮತ್ತು ದೃಶ್ಯದಮಾಧ್ಯಮಗಳು ಇಂದು ಸಮಾಜವನ್ನು ವಿಚಿತ್ರವಾಗಿ ಪ್ರಭಾವಿಸುತ್ತಿವೆ. ಪ್ರಭುತ್ವವು ಬರವಣಿಗೆಯನ್ನೇ ಪ್ರಧಾನವಾಗಿ ಅವಲಂಬಿಸಿದೆ. ಮೇಲಿನ ಎರಡೂ ಮಾಧ್ಯಮಗಳು ಬೇರೆ ಬೇರೆ ಕಾರಣಗಳಿಗಾಗಿ ಪ್ರಬಲವಾಗುತ್ತಿವೆ. ಮಾಹಿತಿಗಳನ್ನು ಕೊಡಲು ಮತ್ತು ಪಡೆಯಲು; ಧೋರಣೆಗಳನ್ನು ಮಂಡಿಸಲು ಮತ್ತು ಹೇರಲು; ಬಂಡವಾಳವನ್ನು ತೊಡಗಿಸಲು ಮತ್ತು ಅದನ್ನು ವೃದ್ಧಿಸಿಕೊಳ್ಳಲು; ಸಾಮಾಜಿಕವಾಗಿ ಗುರುತಿಸಿಕೊಳ್ಳಲು ಮತ್ತು ದಾಖಲಾಗಲು. ಬರವಣಿಗೆ ಮತ್ತು ದೃಶ್ಯಮಾಧ್ಯಮಗಳಲ್ಲಿ ದಾಖಲಾಗುವ ತೀವ್ರತೆ ಇಂದು ಕಾಣುತ್ತಿದೆ. ಈ ಬಗೆಯ ದಾಖಲೀಕರಣ ಮಾತ್ರವೇ ಚರಿತ್ರೆಯಾಗಬಲ್ಲದು ಎಂಬ ನಂಬಿಕೆಯೂ ಇದರಲ್ಲಿದೆ. ಅಂದರೆ ವರ್ತಮಾನದಲ್ಲಿ ದಾಖಲೀಕರಣಗೊಳ್ಳುವುದೆನೆಂದರೆ ಭವಿಷ್ಯದಲ್ಲಿ 'ಚರಿತ್ರೆ' ಯಾಗುವ ಅಪೇಕ್ಷೆಯು ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ಕೆಲಸ ಮಾಡುತ್ತಿದೆ. ವರ್ತಮಾನದಲ್ಲಿ ತೀವ್ರ ಬಿಕ್ಕಟ್ಟಿನಲ್ಲಿರುವ ಸಾಮಾನ್ಯರು ಭವಿಷ್ಯದಲ್ಲಿ ಭರವಸೆಯನ್ನು ಕಾಣಬೇಕಾಗಿದೆ. ಇದಕ್ಕಾಗಿ ಇವರು ಭವಿಷ್ಯವನ್ನು ರೂಪಿಸಿಕೊಳ್ಳಬೇಕಾಗಿದೆ. ಇದು ಸಮಾಜದ ಮುಂದಿರುವ ಸಂಕೀರ್ಣವಾದ ಸವಾಲು ಮತ್ತು ಬಹುದೊಡ್ಡ ಸವಾಲು. ಆದರೆ ಕೇವಲ ವೈಯಕ್ತಿಕ ವಿವರಗಳಲ್ಲಿ ದಾಖಲಾಗುವ ಧೋರಣೆಗೆ ಮುಂದಿನ ಕನಸುಗಳಿರುವುದಿಲ್ಲ. ಹಿಂದಿನ ನೆನಪುಗಳು ಮಾತ್ರ ಮುಖ್ಯವಾಗುತ್ತವೆ. ನೆನಪುಗಳೆ ಕನಸುಗಳ ಬೀಜಗಳು ಇರಬಹುದಾದರೂ

ನೆನಪುಗಳ ದಾಖಲೀಕರಣದ ಕ್ರಮದಲ್ಲಿ ಕನಸುಗಳನ್ನೇ ನಾಶಮಾಡುವ ವಿದ್ರೋಹವೂ ಇಲ್ಲದಿಲ್ಲ. ಹಾಗಾಗಿ ನೆನಪುಗಳನ್ನು ಆಯ್ಕೆಮಾಡುವ, ಜೋಡಿಸುವ ಮತ್ತು ಮಂಡಿಸುವ ಕ್ರಮದಲ್ಲೇ ಕನಸುಗಳನ್ನು ಹುಟ್ಟುಹಾಕುವ ಮತ್ತು ಇಲ್ಲವಾಗಿರುವ ಪ್ರಯತ್ನ ಅನಾಯಾಸವಾಗಿ ನಡೆದಿರುತ್ತದೆ.

ಈ ಶತಮಾನದ ಆರಂಭದಲ್ಲಿ ಯುರೋಪಿನಲ್ಲಿ ಖಾಸಗಿ ಕೈಗಾರಿಕಾ ಬಂಡವಾಳವು ಜಾಗತಿಕ ಶೋಷಣೆಯ ಬಂಡವಾಳವಾಗಿ ಬೆಳೆಯುತ್ತಿತ್ತು. ಅದೇ ಕಾಲಕ್ಕೆ ಅದನ್ನು ಸಮಾಜವಾದಿ ಬಂಡವಾಳವನ್ನಾಗಿ ಮಾರ್ಪಡಿಸುವ ಕ್ರಾಂತಿಕಾರಿ ಚಳುವಳಿಗಳೂ ನಡೆಯುತ್ತಿದ್ದವು. ಇಂತಹ ಸಮಾಜವಾದಿ ಕನಸುಗಳನ್ನು ಮುರಿಯುವ ಪ್ರಯತ್ನದ ಭಾಗವಾಗಿ, ಯುರೋಪಿನ ರಾಜಕೀಯ ಸೈದ್ಧಾಂತಿಕತೆಯು 'ಭಾರತೀಯರಿಗೆ ಚರಿತ್ರೆಯ ತಿಳುವಳಿಕೆ ಇಲ್ಲ' ಎಂದು ಬೆದರಿಸುತ್ತಿತ್ತು. ಇದಕ್ಕೆ ಉತ್ತರವೆಂಬಂತೆ ಭಾರತೀಯ ವಿದ್ವಾಂಸರು ಭಾರತೀಯ ಚರಿತ್ರೆಯಲ್ಲಿ 'ಸುವರ್ಣಯುಗ'ಗಳಿವೆ ಎಂದು ವ್ಯಾಖ್ಯಾನಿಸಿದರು. ಆದರೆ ಭವಿಷ್ಯದಲ್ಲಿ ಸಾಮಾನ್ಯರಿಗೆ ಯಾವಾಗ 'ಸುವರ್ಣಯುಗ' ಬರುತ್ತದೆ ಎಂಬ ಕನಸುಗಳನ್ನು ಆ ಚರಿತ್ರೆಕಾರರು ಕಾಣಲಿಲ್ಲ.

ಈಗ ಶತಮಾನದ ಅಂಚಿನಲ್ಲಿ ಜಾಗತಿಕ ಬಂಡವಾಳವು ಬಿಕ್ಕಟ್ಟಿನಲ್ಲಿದೆ. ಅದು ತನ್ನ ಬಿಕ್ಕಟ್ಟನ್ನು ಮುಚ್ಚಿಟ್ಟುಕೊಂಡು ಅದರಿಂದ ಪಾರಾಗಲು ಕುಟಿಲ ತಂತ್ರಗಳನ್ನು ಬಳಸುತ್ತಿದದೆ. ಅದೇ ಕಾಲಕ್ಕೆ ಆ ಬಿಕ್ಕಟ್ಟನ್ನು ಬಳಸಿಕೊಂಡು ಸಮಾಜವಾದಿ ಬಂಡವಾಳವನ್ನಾಗಿ ಮಾರ್ಪಡಿಸುವ ಪ್ರಯತ್ನಗಳು ನಡೆಯುತ್ತಿವೆ. ಆದರೆ ಸಾಮ್ರಾಜ್ಯಶಾಹಿಯ ರಾಜಕೀಯ ಸೈದ್ಧಾಂತಿಕತೆಯು 'ಚರಿತ್ರೆಗೆ ಮುನ್ನಡೆಯೇ ಇಲ್ಲ; ಇದು ಚರಿತ್ರೆಯ ಅಂತ್ಯ' ಎಂದು ಸಾರುತ್ತಿದೆ. ಇದಕ್ಕೆ ಪೂರಕವಾಗಿ ರಾಜಕೀಯ ಸೈದ್ಧಾಂತಿಕತೆಯನ್ನು ರೂಪಿಸುತ್ತಿದೆ. ನಮ್ಮ ಅನೇಕ ಉನ್ನತ ಎಂದು ಕರೆಯಲಾಗುವ ಬರವಣಿಗೆಗಳಲ್ಲಿ ವರ್ತಮಾನದ ಕಠೋರವಾದ ಚಿತ್ರಣಗಳಿರುತ್ತವೆ, ಜೊತೆಗೆ ಚರಿತ್ರೆಯ ಅತಿ ರಂಜಿತ ವೈಭವೀಕರಣಗಳಿರುತ್ತವೆ. ಆದರೆ ಸಮಾಜದ ಮುನ್ನಡೆಯ ಸಮಾಜವಾದಿ ಕನಸುಗಳಿರುವುದಿಲ್ಲ. ಇಂಥ ಸೈದ್ಧಾಂತಿಕ ಸಂದಿಗ್ಧತೆಯ ಅತಿ ಸೂಕ್ಷ್ಮಗಳನ್ನು

ಕುರಿತು ಆಲೋಚಿಸುವಂತೆ ಆತ್ಮಕಥೆಗಳು ತಮ್ಮ ಆಳದಲ್ಲಿ ಒತ್ತಾಯಿಸುತ್ತವೆ ಇಲ್ಲವೆ ಎಚ್ಚರಿಸುತ್ತವೆ.

ನಮ್ಮ ಬಹುತೇಕ ಸಾಹಿತ್ಯಿಕ ಅಧ್ಯಯನಗಳಲ್ಲಿ ಕಥಾ ಸಾಹಿತ್ಯವು ಪ್ರಧಾನವಾದ ಮತ್ತು ಸಮೃದ್ಧವಾದ ಆಕರವಾಗಿದೆ. ಬರವಣೆಗೆಯನ್ನು ಸೃಜನಶೀಲ ಮತ್ತು ಸೃಜನೇತರ ಎಂದು ಯಾಂತ್ರಿಕವಾಗಿ ವಿಂಗಡಿಸಿದ್ದೂ ಇದಕ್ಕೊಂದು ನೆಪವಾಗಿದೆ. ಹಾಗಾಗಿ ಸೃಜನೇತರ ಎಂದು ಕರೆಯಲಾಗುವ ಬರವಣಿಗೆಗಳನ್ನು ಅಧ್ಯಯನಗಳು ಸಮೃದ್ದ ಆಕರಗಳೆಂದು ಪರಿಗಣಿಸಲಿಲ್ಲ. ಜೊತೆಗೆ ಸಾಹಿತ್ಯದಲ್ಲಿ 'ಕಲಾತ್ಮಕತೆ'ಯ, 'ಶ್ರೇಷ್ಠತೆ'ಯ ವಿಂಗಡೆಣೆಯ ನೆಲೆಗಳೂ ಇದಕ್ಕೆ ಪೂರಕವಾಗಿ ಕೆಲಸ ಮಾಡಿದವು. ಫಲವಾಗಿ ಸೃಜನೇತರ ಎಂದು ಕರೆಯಲಾಗುವ ಬರವಣಿಗೆಯನ್ನು ಕುರಿತ ಅಧ್ಯಯನಗಳು ಮುಂಚೂಣಿಗೆ ಬರಲಿಲ್ಲ. ಆದರೆ ಇತ್ತೀಚಿಗೆ ಸಾಹಿತ್ಯ ಪ್ರಕಾರಗಳ ನಡುವಿನ ಗೆರೆಗಳನ್ನು ಮುಖ್ಯವೆಂದು ಅಧ್ಯಯನಗಳು ಪರಿಗಣಿಸುತ್ತಿಲ್ಲ. ಎಲ್ಲವನ್ನೂ ಬರವಣಿಗೆಯ ದಾಖಲೆಗಳೆಂದು ಪರಿಗಣಿಸುತ್ತಿವೆ. ಆಕರ ನಿರ್ಮಾಣ ಅಧ್ಯಯನಗಳಿಗಿಂತ ತಾತ್ತ್ವಿಕ ಚರ್ಚೆಯ ಅಧ್ಯಯನಗಳು ಮುಂಚೂಣಿಗೆ ಬರುತ್ತಿವೆ. ಹಾಗಾಗಿ ಆತ್ಮ ಕಥೆಗಳನು ಕುರಿತು ಪ್ರಸ್ತುತ ಅಧ್ಯಯನವು ಬರಿಯ ಆಕರ ನಿರ್ಮಾಣದ ಅಧ್ಯಯನವಾಗಿರದೆ ತಾತ್ವಿಕ ಚರ್ಚೆಯ ಮಾದರಿಯನ್ನು ಅನುಸಿರಿಸುತ್ತದೆ.

ಬೇರೆ ಬೇರೆ ಬರವಣಿಗೆಗಳನ್ನು ಮಾಡಿದವರೂ ಸಹ ಆತ್ಮ ಕಥೆಗಳನ್ನು ಬರೆದಿದ್ದಾರೆ. ತಮ್ಮ ಇತರೆ ಬರವಣಿಗೆಗಳಲ್ಲಿ ಹೇಳಲಾಗಿದಿದ್ದುನ್ನು ಪ್ರಕಟಿಸುವ ಒತ್ತಡಕ್ಕೆ ಒಳಗಾಗಿರುವುದನ್ನು ಇದು ಸೂಚಿಸುತ್ತದೆ. ಹಾಗೆ ಪ್ರಕಟಿಸಬಯಸುವ ಸಂಗತಿಗಳು ಯಾವುವು ಎಂಬ ಕುತೂಹಲವು ಈ ಅಧ್ಯಯನಕ್ಕೆ ಸಹಜವಾಗಿ ಬರುತ್ತದೆ.

# ಅಧ್ಯಾಯ : 6

**ಸಮಾರೋಪ**

ಬಳ್ಳಾರಿ ನಾಟಕ ಮುಗಿದ ತರುವಾಯ ಜೋಳದರಾಶಿ ನಾಟಕದಲ್ಲಿ ಯಾವ ಆಸಕ್ತಿ ವಹಿಸದೆ ಗೌಡರು ಸಾಹಿತ್ಯ, ಗಮಕಾಭ್ಯಾಸದಲ್ಲಿ ತೊಡಗಿದರು, ಬಾಲ್ಯದಿಂದಲೂ ಬಿಡದೆ ಹಿಡಿದುಕೊಂಡು ಬಂದ ಈ ಅಭಿರುಚಿಯು, ಗೊಂದಲಮಯವಾದ ನಾಟಕದಿಂದ ಬೇಸತ್ತ ಗೌಡರು ಈ ಸಮಯದಲ್ಲಿ ಅವರಿಗೆ ಆತ್ಮ ವಿಕಾಸಕ್ಕೆ ಸಹಾಯಕಾರಿಯಾದವು. ತೆಲುಗು-ಕನ್ನಡ ಕಾವ್ಯಗಳನ್ನು ಜೋಳದರಾಶಿಯಲ್ಲಿಯೇ ಓದುವ ಅಭ್ಯಾಸವು ನಡೆಯಿತು. ಗೌಡರ ಮನೆಯ ಪಕ್ಕದವರಾದ ಕಲ್ಲನ ಗೌಡರು, ಗೌಡರ ತಾತನವರ ಕಾಲದಿಂದ ಗೌಡರ ಹಿತೈಷಿಗಳಾಗಿದ್ದು ಪ್ರತಿಯೊಂದು ಕಾರ್ಯದಲ್ಲಿಯೂ ಗೌಡರ ಕುಟುಂಬಕ್ಕೆ ನೆರವಾಗಿದ್ದರು. ಗ್ರಾಮದಲ್ಲಿ ನ್ಯಾಯ ಪಂಚಾಯಿತಿಗಳ ತೀರ್ಮಾನದಲ್ಲಿ, ಪ್ರಾಮಾಣಿಕತೆಯಲ್ಲಿ ಸಜ್ಜನರಾಗಿದ್ದುದಲ್ಲದೆ ಸಾಹಿತ್ಯಾಭಿಮಾನಿಗಳಾಗಿದ್ದರು. ರಾತ್ರಿ 10-11 ಗಂಟೆಗವರೆಗೂ ಪುರಾಣವಾಚನವಾಗುತ್ತಿತ್ತು. ಸಾಯಂಕಾಲ ಗುಡಿಯ ಮುಂದೆ ಕುಳಿತು ನೆರೆದ ಜನರಿಗೆ ಪುರಾಣಗಳನ್ನು ಓದುತ್ತಿದ್ದರು.

ಇಲ್ಲಿಯ ಜನಪದ ಸಾಹಿತ್ಯ ಸಮ್ಮೆಳನದಲ್ಲಿ ನೂರಾ ಅರವತ್ತೈದು ಮೈಲು ಕಾರಿನಲ್ಲಿ ಸಾಗಿಬಂದ ಗೌಡರು, ಜಾನಪದ ಸಾಹಿತಿಯಾಗಿಯೇನು ಬಂದಿರಲಿಲ್ಲ, ಗಮಕಿಯಾಗಿ ಪ್ರೌಢ ಕಾವ್ಯ ವಾಚನಕ್ಕಾಗಿ ಬಂದಿದ್ದರು. ಒಂದು ದಿನ "ಹರಿಶ್ಚಂದ್ರ ಕಾವ್ಯ"ವನ್ನು ಪ್ರಾರಂಭಿಸಿದರು. ಅದು ರಸವತ್ತಾದ ಮಹಾಕವಿಯು ಪ್ರಯೋಗಗಳಿಂದ ಭಾವರಸಯುಕ್ತವಾಗಿ ಗಮಕ ಪದ್ಧತಿಯಲ್ಲಿ ಹರಿಶ್ಚಂದ್ರ ಹೊಲೆಯರ ಸಂವಾದ ನಡೆಯುತ್ತಿರುವಾಗ ಮುಂದೆ ಕೂಡ ಹುಡುಗರು ಕಿಸಿಕಿಸಿ ಕಿರಿಕಿರಿ ಮಾಡಿದರು. ರಸಾವೇಶದಲ್ಲಿದ್ದ ಗೌಡರು ಕೆರಳಿ ಕೋಪ ತಾಮ್ರಾಕ್ಷನಾಗಿ, ಓದುತ್ತಿದ್ದ ಆ ಕಾವ್ಯವನ್ನೇ ತಾಳ್ಮೆಗೆಟ್ಟು ಬೀಸಿ ಮುಂದಿನವರ ಮೇಲೆಸೆದರು. ಲಿಂಗಣ್ಣನವರು ಎಲ್ಲಿದ್ದರೇನೋ ಧಾವಿಸಿ ಬಂದರು. ಬಿದ್ದ ಪುಸ್ತಕವನ್ನು ಎತ್ತಿಕೊಟ್ಟು ವಿಕೋಪಕ್ಕೆ ಹೋದ ಸನ್ನಿವೇಶವನ್ನು ಸರಳಗೊಳಿಸಿ, ನೆಮ್ಮದಿಯಿಂದ ಮುಂದಿದ್ದ ಹುಡುಗರನ್ನು ದೂರ ಕೂಡಿಸಿ ಓಂದಿದ್ದ ಓರಿಯರನ್ನು ಮುಂದೆ ಕೂಡಿಸಿ, ಕಾವ್ಯ ವಾಚನಕ್ಕೆ ವ್ಯವಸ್ಥಿತವಾದ ಸಮಯವನ್ನು, ಸ್ಥಾನವನ್ನು ಕಲ್ಪಿಸಿಕೊಟ್ಟರು.

ಕಾವ್ಯರಚನೆ, ನಾಟಕ, ಪ್ರವಚನ ಇವು ದೊಡ್ಡನಗೌಡರ ಪ್ರತಿಭೆಯ ಅಭಿವ್ಯಕ್ತಿಗೆ ಮಾಧ್ಯಮಗಳಾಗಿದ್ದವು. ಇವುಗಳಲ್ಲಿ ಗೌಡರು ಹೆಚ್ಚು ಒಲಿದದ್ದು ನಾಟಕಕ್ಕೆ. ತಮ್ಮ ಇಳಿವಯಸ್ಸಿನಲ್ಲಿ ತಮ್ಮ ಬದುಕನ್ನು ಸಿಂಹಾವಲೋಕನ ಕ್ರಮದಿಂದ ನೋಡುತ್ತಿದ್ದಾಗ ಈ ಮಾತು ಖಾತ್ರಿ ಅನಿಸಿತು. "ನಿನ್ನ ಜೀವನದ ಮುಖವಾವುದು? ಎಂದು ನನ್ನನ್ನು ನಾನೇ ಕೇಲಿಕೊಂಡೆ. 'ನಾಟಕ' ಎಂದಿತು ಒಳದನಿ" ಎಂದು ಹೇಳಿಕೊಂಡಿದ್ದಾರೆ (ಡೈರಿ 27–3–82). ಬಾಲ್ಯದಲ್ಲಿಯೇ ಬಣ್ಣದ ಬದುಕು ಅವರನ್ನು ಆಕರ್ಷಿಸಿತು.

ದೊಡ್ಡನಗೌಡರ ಕೃಷ್ಣನ ಪಾತ್ರಕ್ಕೆ ಮದ್ರಾಸಿನಿಂದ ವಿಶೇಷ ಬಣ್ಣ–ವೇಷಭೂಷಣಗಳನ್ನು ತರಿಸಿದ್ದರ ಸುದ್ದಿಯಾಗಿ ಜನರಲ್ಲಿ ಕುತೂಹಲ ಮೂಡಿತ್ತು. ರಾತ್ರಿ 10 ಗಂಟೆಗೆ ಪ್ರಾರಂಭವಾದ ನಾಟಕ ಬೆಳಗಾಗುವರೆಗೆ ನಡೆಯಿತು. ಸೇವಕನಿಗೆ ಮೊದಲು ಮಾಡಿ ಎಲ್ಲ ಪಾತ್ರಗಳಿಗೂ ಹಾಡುಗಳಿದ್ದವು. ಮೂರು ವರ್ಷಗಳಿಂದ ಅನಿಷ್ಟ ನಾಟಕವೆಂಬ ಅಪವಾದಕ್ಕೆ ಗುರಿಯಾಗಿದ್ದ 'ಗರುಡ ಗರ್ವ ಭಂಗ' ಯಾವುದೇ ವಿಘ್ನಗಳಿಲ್ಲದೆ ಯಶಸ್ವಿಯಾಗಿ ಪ್ರದರ್ಶನಗೊಂಡು ಜನಮೆಚ್ಚುಗೆ ಪಡೆದುದಕ್ಕಾಗಿ ಗೌಡರಿಗೆ ತೃಪ್ತಿ–ಹೆಮ್ಮೆ–ಸಂತಸ. ಆ ಪ್ರಯೋಗ ಕುರಿತು "ನಮ್ಮ ನಾಟಕ ನಮಗೇ ದಂಗುಬಡಿಯು ವಂತಾಯಿತು. ಪ್ರವೇಶಗಳು ಒಂದಕ್ಕಿಂತ ಒಂದು ರಂಜನೆಯಾಗಿ ನಡೆದುಕೊಂಡು ಹೋಗುತ್ತಿರುವಾಗ ನಮಗರಿವಿಲ್ಲದೇ ಸೂರ್ಯೋದಯವಾಗಿತ್ತು." ಎಂದು ಹೇಳಿದ್ದಾರೆ.

ಜೋಳದರಾಶಿಯಿಂದ ಬಳ್ಳಾರಿ ರಂಗಮಂಚಕ್ಕೆ ಬಂದ ದೊಡ್ಡನಗೌಡರು ಬಳ್ಳಾರಿ ರಾಘವರ ಮಂಡಳಿ ಪ್ರವೇಶಿಸಲು ತಡವಾಗಲಿಲ್ಲ, ಗೌಡರ ಅಭಿನಯವನ್ನು ತುಂಬಾ ಮೆಚ್ಚಿಕೊಂಡಿದ್ದ ರಾಘವರು ಅವರನ್ನು ತಮ್ಮ 'ಬಳ್ಳಾರಿ ಆರ್ಟ ಲೀಗ್'ಗೆ ಆಹ್ವಾನಿಸಿದರು. ರಾಘವರು ಜೋಳದರಾಶಿಗೆ ಬಂದು ಪಂಪನಗೌಡರಿಗೆ ವಿನಂತಿ ಮಾಡಿಕೊಂಡರು. "ಗೌಡ್ರೇ, ಮುಂದಕ್ಕೆ ಬರುವ ಮಗನನ್ನು ತಡೆಯಬೇಡಿರಿ. ನನ್ನ ಮಗನಂತೆ ಕಾಳಜಿಯಿಂದ ನೋಡಿಕೊಳ್ಳುತ್ತೇನೆ" ಎಂದು ಭರವಸೆಕೊಟ್ಟು ಪಂಪನಗೌಡರನ್ನು ಒಪ್ಪಿಸಿದರು.

ರಾಘವರಿಗೆ ದೊಡ್ಡನಗೌಡರ ಮೇಲೆ ವಿಶೇಷ ಪ್ರೀತಿ, ಅಭಿಮಾನ. ಗೌಡರ ಅಭಿನಯ ಕಲೆಗೆ ಅವರು ಮನಸೋತಿದ್ದರು. ರಾಘವರ ಮನೋಭಾವಕ್ಕೆ ತಕ್ಕಂತೆ ಅವರ ನಿರ್ದೇಶನದ ಸೂತ್ರಗಳನ್ನೆಲ್ಲ ಮೈಗೂಡಿಸಿಕೊಂಡು ತನ್ಮಯತೆಯಿಂದ ಪಾತ್ರಗಳನ್ನು ಅಭಿನಯಿಸುತ್ತಿದ್ದ ದೊಡ್ಡನಗೌಡರು ರಾಘವರ ಅಚ್ಚುಮೆಚ್ಚಿನ ಶಿಷ್ಯರಾದುದರಲ್ಲಿ ಅಚ್ಚರಿ ಇಲ್ಲ. 1935 ರಿಂದ ರಾಘವರ ಅಂತ್ಯದ ವರೆಗೆ (1946) ಅವರ ಮಂಡಳಿಯ ಪ್ರಮುಖ ನಟರಾಗಿ ದೊಡ್ಡನಗೌಡರು ಆಂಧ್ರ ಕರ್ನಾಟಕಗಳಲ್ಲಿ ಹೆಸರು ಮಾಡಿದರು. ರಾಮದಾಸ್, ಸಾರಂಗಧರ, ಭಕ್ತ ಮಾರ್ಕಂಡೇಯ, ಚಾಣಿಕ್ಯ, ಪ್ರಹ್ಲಾದ, ಪಾದುಕಾ ಪಟ್ಟಾಭಿಷೇಕ ಮುಂತಾದವು ರಾಘವರ ನಾಟಕಗಳು. ಇವುಗಳಲ್ಲಿ ಗೌಡರು ಕಬೀರ್, ರಾಮ, ನಾರದ, ಸುಬುದ್ಧಿ, ಚಂದ್ರಗುಪ್ತ ಮೊದಲಾದ ಪಾತ್ರಗಳನ್ನು ಮಾಡುತ್ತಿದ್ದರು. ರಾಘವರ ಖಾಸಾ ಪ್ರೀತಿಯ ನಾಟಕವೆಂದರೆ ರಾಮದಾಸ್. ಇದರಲ್ಲಿ ರಾಘವರು ರಾಮದಾಸ್ ದೊಡ್ಡನಗೌಡರು ಕಬೀರ್. ಈ ನಾಟಕ ಆಂಧ್ರದ ತುಂಬ ಬಹಳ ಜನಪ್ರೀಯವಾಯಿತು. ದೊಡ್ಡನಗೌಡರ ಕಭೀರ್ ಪಾತ್ರದ ಅಭಿನಯವನ್ನು ತುಂಬಾ ಮೆಚ್ಚಿಕೊಂಡು ಆಂಧ್ರರು ಅವರನ್ನು 'ಕಭೀರ್‌ಗೌಡ' ಎಂದು ಕರೆಯಲಾರಂಭಿಸಿದರು.

ನಾಟಕದಲ್ಲಿ ಸ್ತ್ರೀಪಾತ್ರ ಸ್ತ್ರೀಯರೇ ಮಾಡಬೇಕೆಂಬುದು ರಾಘವರ ಮತ್ತು ದೊಡ್ಡನಗೌಡರ ಖಚಿತ ಅಭಿಪ್ರಾಯ. ಬಯಲಾಟಗಳಲ್ಲಿ ಪುರುಷರು ಸ್ತ್ರೀಪಾತ್ರ ವಹಿಸುವುದು ಮೊದಲಿನಿಂದಲೂ ಬಂದ ರೂಢಿ. ಹಾಗೇ ನಾಟಕಗಳಲ್ಲಿಯೂ ಪುರುಷರೇ ಸ್ತ್ರೀಪಾತ್ರ ಮಾಡುತ್ತಿದ್ದರು. ರಾಘವರು ಈ ಕ್ರಮವನ್ನು ವಿರೋಧಿಸಿದರು. ಮಡಿವಂತರ ಟೀಕೆ ನಿಂದೆಗಳಿಗೆ ಕಿವಿಗೊಡದೆ ಆದವಾನಿಯ ಪಾತ್ರರದವರನ್ನು ಸ್ತ್ರೀಪಾತ್ರಕ್ಕೆ ಕರೆತಂದರು.

ನಾಟಕ ದೊಡ್ಡನಗೌಡರಿಗೆ ಸರ್ವಸ್ವವಾಗಿತ್ತು. ಅವರ ಆರಾಧ್ಯದೈವ ಜೋಳದರಾಶಿಯ ರಾಮೇಶ ಮತ್ತು ನಾಟ್ಯದೇವತೆ ನಟರಾಜ, ನಾಟಕ ಪರಿಷತ್ತಿನ ಉದ್ಘಾಟನೆ, ನಾಟ್ಯಜಯಂತಿ ಮುಂತಾದ ಕಾರ್ಯಕ್ರಮಗಳಲ್ಲಿ ನಟರಾಜನ ಧ್ವಜಾರೋಹಣ ನಡೆಸುತ್ತಿದ್ದರು. ಇಂದು ಮಾರ್ಚ್ 28 ರಂದು ಆಚರಿಸುವ 'ರಂಗಭೂಮಿ ದಿನ"ವನ್ನು ಗೌಡರು 'ನಾಟ್ಯಜಯಂತಿ' ಎಂದು ಆಚರಿಸುತ್ತಿದ್ದರು.

## ಪುರಕ ಪಠಗಳು


- ಆತ್ಮ ಕಥೆಗಳಲ್ಲಿ ಕರ್ನಾಟಕ ಕತೆ – ಬಿ.ಎಂ. ಪುಟ್ಟಯ್ಯ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ –1999.
- ಜೋಳದರಾಶೀ ದೊಡ್ಡನಗೌಡರು – ಡಾ. ಬಸವರಾಜ ಮಲ ಶೆಟ್ಟಿ.
  ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಗದಗ 2005.
- ನಂದೇನಾನೋದಿದೆ – ಜೋಳದರಾಶಿ ದೊಡ್ಡನಗೌಡರು, ಸುವರ್ಣ ಸಾಹಿತ್ಯ ಗ್ರಂಥ ಮಾಲೆ 2006. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
- ಲೋಕ ವಿರೋಧಿಗಳ ಜತೆಯಲ್ಲಿ – 15 ಮಾತು ಕತೆಗಳು
  ಸಂದರ್ಶಕ ಮತ್ತು ಸಂಪಾದಕ : ರಹಮತ್ ತರೀಕೆರೆ
  ಕನ್ನಡ ಸಂಘ, ಕ್ರೈಸ್ಟ್ ಕಾಲೇಜ, ಬೆಂಗಳೂರು 2005.
- ಊರು ಕೇರಿ – ಸಿದ್ದಲಿಂಗಯ್ಯ.
- ಅನುಮ ನಿರಂಜನ – ನೆನಪು, ಸಹಿ, ಕಹಿ, ಡಿ.ವಿ.ಕೆ ಮೂರ್ತಿ ಮೈಸೂರು 1990.
- ಸಾರಾ ಅಬೂಬಕರ್– ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು, ಪತ್ರಿಕೆ ಪ್ರಕಾಶನ, ಬೆಂಗಳೂರು, 1284.
- ರಹಮತ್ ತರೀಕೆರೆ – ನೇತು ಬಿದ್ದ ನವಿಲು – ಲಂಕೇಶ್ ಪ್ರಕಾಶನ, ಬೆಂಗಳೂರು 2013.
- ಪ್ರತಿಭಾನಂದಕುಮಾರ್ – ಅನುದಿನದ ಅಂತರಗಂಗೆ, ಅಹರ್ಸಿಶಿ ಪ್ರಕಾಶನ, ಶಿವಮೊಗ್ಗ.
- ಕುವೆಂಪು ಅವರ – ನೆನಪಿನ ದೋಣಿ.